# ಭೂಮಿತಾಯಿ



ಲೇಖಕರು :
ಲಿಂಗಸುಗೂರು ವಿಟ್ಠಲರಾಯರು



ಸತ್ಯಾಶ್ರಯ ಪ್ರಕಾಶನ ಮಂದಿರ, ಹೈದರಾಬಾದು.

# ಮುನ್ನುಡಿ

ಶ್ರೀ. ಲಿಂಗಸೂಗೂರು ವಿಟ್ಠಲರಾಯರು ಹೈದರಾಬಾದಿನ ಕನ್ನಡದ ತರುಣ ಲೇಖಕರಲ್ಲಿ ಗಣ್ಯರಾದವರು. ಇವರು ಇದುವರೆಗೆ "ಲೈಲಾಪತ್ರಗಳು", "ದೇವರ ಹೊಲ" ಮೊದಲಾದ ಹಳ್ಳಿಯ ಕೃತಿಗಳನ್ನು ಬರೆದು ಕನ್ನಡಿಗರಿಗೆ ಸುಪರಿಚಿತರಾಗಿದ್ದಾರೆ. ಈಗ ಆರು ಏಕಾಂಕ ರೂಪಕಗಳ ಈ ಸಂಕಲನವನ್ನು ಕನ್ನಡಿಗರಿಗೆ ಕೊಟ್ಟಿದ್ದಾರೆ. ಇಲ್ಲಿನ ನಾಟಕಗಳೆಲ್ಲವೂ ಹೈದರಾಬಾದಿನ ರೇಡಿಯೋ ದ್ವಾರಾ ಪ್ರಸಾರಿತವಾಗಿವೆ.

ಶ್ರೀ. ವಿಟ್ಠಲರಾಯರು ಸ್ವತಂತ್ರವಾದ ವಿಚಾರ ಸರಣಿಯುಳ್ಳವರು. ಸಮನ್ವಯ ದೃಷ್ಟಿಯೂ ಇವರಲ್ಲಿದೆ. ಈ ಗುಣಗಳು ಇಲ್ಲಿನ ನಾಟಕಗಳಲ್ಲಿ ಮುಖ್ಯವಾಗಿ ಎದ್ದು ಕಾಣುತ್ತವೆ. ಸಂಭಾಷಣೆಗಳು ಅರ್ಥವತ್ತಾಗಿವೆ. ಅವು ಬರಿಯ ಕಾಲಕ್ಷೇಪಕ್ಕಾಗಿ ಬಂದಿಲ್ಲ; ಕಥೆಯನ್ನು ಬೆಳೆಸುವಲ್ಲಿ ಸಹಾಯಮಾಡುತ್ತವೆ. ನಿರೂಪಣೆ ನೀರಸವಾಗಿರದೆ ಕಥೆಯನ್ನು ಮುಂದು ಮುಂದಕ್ಕೆ ಓದಲು ಕುತೂಹಲವನ್ನು ಪ್ರಚೋದಿಸುತ್ತದೆ.

ಇವರ ಲೇಖನದಲ್ಲಿನ ನಾಟಕೀಯತೆಯ ಗುಣವು ಪ್ರವರ್ಧಮಾನವಾಗಿ ಇವರು ಕನ್ನಡಿಗರಿಗೆ ಇನ್ನೂ ಉತ್ತಮ ನಾಟಕಗಳನ್ನು ಕೊಡುವಂತಾಗಲಿ ಎಂದು ಹಾರಯಿಸಿದೆ.

ಕಾರ್ತಿಕ ಶು|| ೧, ೧೮೭೩ ಶಕೆ. ಡಿ. ಕೆ. ಭೀಮಸೇನರಾವ್

# ಪ್ರಕಾಶಕರ ಮಾತು

ನುಡಿ ಪ್ರಚಾರದ ಮೂಲಕ ನಾಡಸೇವೆ ಮಾಡಬೇಕೆಂಬ ಹಿರಿಯಾಸೆ ಯಿಂದ **ಸತ್ಯಾಶ್ರಯ ಪ್ರಕಾಶನ** ಮಂದಿರವನ್ನು ಪ್ರಾರಂಭಿಸಿ ಈವರೆಗೆ ಕೆಲವು ಪುಸ್ತಕಗಳನ್ನು ಪ್ರಕಟಿಸಿದ್ದಾಗಿದೆ. ಈ ಆಶಯವನ್ನು ಯಶಸ್ವಿ ಯಾಗಿ ಕಾರ್ಯಗತ ಮಾಡಲು ವಿವಿಧ ರುಚಿಗಳಿಗೆ ಹೊಂದಿಕೊಳ್ಳುವಂತೆ ಇನ್ನೂ ಹಲವು ಪುಸ್ತಕಗಳನ್ನು ಪ್ರಕಟಿಸುವ ಉದ್ದೇಶವಿದೆ.

ಶ್ರೀ ವಿಟ್ಠಲರಾಯರು ತಮ್ಮ ಈ ಏಕಾಂಕ ದೃಶ್ಯಗಳ ಸಂಗ್ರಹವನ್ನು ಪ್ರಕಟಿಸಲು ನಮಗೆ ದೊರಕಿಸಿಕೊಟ್ಟು ನಮ್ಮ ಉದ್ದೇಶಕ್ಕೆ ಬೆಂಬಲ ನೀಡಿ ದ್ದಾರೆ. ಇದಕ್ಕಾಗಿ ನಾವು ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸು ತ್ತೇವೆ. ಮತ್ತು ನಮ್ಮ ಸಾಹಿತ್ಯ ಸೇವಾ ಕಾರ್ಯವು ಯಶಸ್ವಿಯಾಗಿ ಮುನ್ನಡೆಯಲು ಕನ್ನಡಿಗರೆಲ್ಲರ ಬೆಂಬಲ ಪ್ರೋತ್ಸಾಹಗಳನ್ನೂ ಆದರದಿಂದ ನಿರೀಕ್ಷಿಸುತ್ತೇವೆ.

೨೩—೧೧—೫೧ ಪ್ರಕಾಶಕರು

# ವಿಷಯಾನುಕ್ರಮಣಿಕೆ







# ಒಪ್ಪೋಲೆ

| ಪುಟ. | ಸಾಲು. | ತಪ್ಪು. | ಒಪ್ಪು. |
|---|---|---|---|
| ೨ | ೧೫ | ಇಲ್ಲಿದ್ರ | ಇಲ್ದಿದ್ರ |
| ೨ | ೧೭ | ಇವತ | ಇವತ್ತ |
| ೨ | ೧೯ | ಇಲ್ಲಿದ್ರ | ಇಲ್ದಿದ್ರ |
| ೩ | ೧೦ | ಸಿಟ್ಟಾಗ್ಯನ | ಸಿಟ್ಟಾಗ್ಯಾನ |
| ೫ | ೧೩ | ಇಟಗೊಂಡರೋ | ಇಟಗೊಂಡೀರೋ |
| ೯ | ೧೦ | ಆದರೆ | ಆದರ |
| ೯ | ೧೧ | ಮಾಡೋಲ್ಲ | ಮಾಡೋರಿಲ್ಲ |
| ೧೨ | ೧೫ | ಇದೇ | ಇರೇ |
| ೧೨ | ೨೪ | ರಂಟ | ರಂಟಿ |
| ೧೨ | ೨೪ | ಕಟ್ಟಿಸ | ಕಟ್ಟಿಸಿ |
| ೧೩ | ೧ | ಇದೇ | ಇರೇ |
| ೧೮ | ೬ | ನೀವು | ನೀನು |
| ೧೮ | ೯ | ನಿನಗೆ ನಾನೆಲ್ಲ | ನಿನಗ ನಾನೆಲ್ಲಿ |
| ೧೮ | ೨೧ | ಸರ್ವೋ | ಸರ್ವೇ |
| ೩೧ | ೧೪ | ಈಗರಾ | ಈಗರೆ |
| ೪೧ | ೩ | ಕಳಸಿತೀನಿ | ಕಳಸತೀರಾ ? |
| ೪೧ | ೨೧ | ಜಾನ | ಜ್ಞಾನ - |
| ೪೬ | ೩೧ | ಹೊಣೆಯಲ್ಲ | ಹೊಣೆಯೆಲ್ಲ |
| ೫೨ | ೭ | ಅಭಿಷಾಯ | ಅಭಿಪ್ರಾಯ |
| ೫೮ | ೧೭ | ಅಕ್ಕಾರ | ಅಕ್ಕರ |
| ೬೩ | ೯ | ಆಂಬ | ಅಂಟ |
| ೬೮ | ೧೫ | ವಾಕ್ಯ | ಕಾವ್ಯ |
| ೭೦ | ೨೦ | ಎಂಬದಿರುವ | ಎಂಬ ವರವಿರುವ |
| ೭೫ | ೧೨ | ಸಂಗದಲ್ಲಿಯೋ | ಸಂಗದಲ್ಲಿಯೇ |
| ೭೬ | ೨ | ನಾಗಶೇಷನ | ನಾಗಭೂಷಣ |
| ೭೮ | ೧೯ | ಸಾಸಿಕಾಗ್ರದಲ್ಲಿ | ನಾಸಿಕಾಗ್ರದಲ್ಲಿ |
| ೭೯ | ೫ | ಎದುರಿಸಲಾರೆನೊ | ಎದುರಿಸಲು |
| ೭೯ | ೧೧ | ಅಲವೇನು | ಆಟವೇನು |
| ೭೯ | ೧೮ | ಶಾಂತಿ | ಶಾಂತ |

# ಭೂಮಿತಾಯಿ

## —: ಪಾತ್ರಗಳು :—

**ಕೇಶವರಾವ್:—** ತಾಲೂಕಿನಲ್ಲಿರುವ ನಿವೃತ್ತ ವಕೀಲರು. ಕಾಂಗ್ರೆಸ್‌ಮುಖಂಡರು. ವಯಸ್ಸು ೫೨.

**ಎಲ್ಲಪ್ಪ:—** ಕೇಶವರಾಯರ ರೈತ. ವಯಸ್ಸು ೪೦

**ಶ್ರೀಕಂಠ:—** ಸಾರ್ವಜನಿಕ ಕಾರ್ಯಕರ್ತ

**ಪುರುಷೋತ್ತಮ:—** ಕೇಶವರಾಯರ ಸೋದರ ಅಳಿಯ, ತಹಶೀಲ್ದಾರ್. ಶ್ರೀಕಂಠನ ಬಾಲ್ಯ ಸ್ನೇಹಿತ.

**ವಿಮಲಾ:—** ಕೇಶವರಾಯನ ಮಗಳು. ಪುರುಷೋತ್ತಮನ ಪತ್ನಿ.

## [೧]

**[ಸಂಜೆಯ ಸಮಯ, ಎಲ್ಲಪ್ಪ ತನ್ನ ಮನೆ ಮುಂದೆ ನಿಂತಿದ್ದಾನೆ. ಶ್ರೀಕಂಠ ಬರುತ್ತಾನೆ.]**

**ಎಲ್ಲಪ್ಪ:—** ಶರಣಪ್ಪ. ಒಲ್ದಾಗ ಓಗಿದ್ದೇನಪ್ಪ?

**ಶ್ರೀಕಂಠ:—** ಹೌದು.

**ಎಲ್ಲಪ್ಪ:—** ಕುಂದ್ರೆಪ್ಪ, ಓಗವಂತಿ.

**ಶ್ರೀಕಂಠ:** [ಕಟ್ಟೆಯ ಮೇಲೆ ಕೂಡ್ರುತ್ತ] ಮತ್ತೇನ ಸುದ್ದಿ, ಎಲ್ಲಪ್ಪ?

**ಎಲ್ಲಪ್ಪ:-** ನನ್ನ ಒಲದ್ದೀಟು ಬಗೆಹರಿಸಿದ್ರೆ ಪಾಡ ಆಗ್ತೈತಿ.

ಶ್ರೀ:- ಯಾಕ ಕಾಳಜಿ ಮಾಡತೀದಿ. ನಿನಗನಕಾ ಸಾಗೋಳೀ ಪತ್ರಂತು ಬರಕೊಟ್ಟಾರಲ್ಲ ಕೇಶವರಾಯರು. ಅವರು ಹೊಲಾ ಬಿಡ್ಡಿಸ ಬೇಕಂದ್ರು ಕಾನೂನು ಬಿಡಿಸಗೊಡೋದಿಲ್ಲ.

ಎ:- ಕಾಯ್ದೆ ಕಾನೂನು ಅದೆಲ್ಲಾ ಜಗಳಾ ಮಾಡಾವರ್ಗೆ, ನಮ್ಮಂತ ಬಡ ಸೂಳೀಮಕ್ಕಳ ಎಲ್ಲಿ ಜಗಳಾ ಮಾಡಾವ್ರಿ? ಇದ್ದೂರಾಗಿ ದ್ದೋರು. ದೊಡ್ಡ ಮನಿಸೇರು. ಅವರ ಕೂಡ ಜಗಳಾಡಿ ಯಾಂಗ ಬದಕೇವ್ರಿ?

ಶ್ರೀ:- ಇಲ್ಲ ನೋಡು,ಬದಕೋದು ಎಲ್ಲಾರಿಗೂ ಬೇಕು. ಅವರಿಂದ ನೀ ಬದಕೀದಿ, ನಿನ್ನಿಂದ ಅವರು ಬದಕ್ಯಾರ. ಒಬ್ಬರು ಇನ್ನೊಬ್ಬರನ್ನು ಬದಕಗೊಡಬಾರದಂತ ಮಸಲತ್ತ ಮಾಡಿದರ ನಾಕ ಮಂದಿ ಸುಮ್ಮನ ಯಾಕಿ ದ್ದಾರು? ಕಾಯನೆ ಯಾಕ ಸುಮ್ಮನಿದ್ದೀತು?ಕೇಶವರಾಯರು ಕಾಂಗ್ರೆಸ್ ಮುಖಂಡರು.ಅವರಃ ಹೀಂಗ ಮಾಡಿದರ ಹ್ಯಾಂಗ ಆದೀತು? ನೀ ಏನ್ನ ಅಂಜಬೇಡ. ನಾ ಇದ್ದೀನಲ್ಲ! ನಾ ಹೇಳಿದ್ಹಾಂಗ ಕೇಳಿನಪ್ಪ.

ಎಲ್ಲಪ್ಪ:- ನಾಕ ಮಂದಿ ಏಳದೆಂಗ ಕೇಳಬೇಕ, ಬಿಡಪ್ಪ. ಅಡರಾ ಗೇನು?ಅಂಗಾದರ ಅಂಗ ಆಗಲಿ. ಸುಮ್ಮ ಸುಮ್ಮಕೆ ಕುಂತ ಕುಂತಲ್ಲೆ ಇಲ್ಲದ ಲಿಗಾಟ ನನ ವ್ಯಾಗ ಬಂದು ಅಪ್ಪ ಸಿಟ್ಟಾಗಿ ಬಿಟ್ಟನರಿ. ಇಲ್ಲಿದ್ರ ಈ ಇಷ್ಟ ತ್ತೂರಸದಿಂದ ಒಲಾನಾ ಮಾಡಿಕೆಂತ ಬಂದೀನಿ.

ಶ್ರೀ:- ೨೦ ವರ್ಷದಿಂದ ಮಾಡಿಕೋತ ಬಂದ ಹೊಲಾನ ಇವತ ಹ್ಯಾಂಗ ಬಿಡಿಸತಾರೊ? ಬೇಕಾದ್ದ ಲಿಗಾಟ ಇರವಲ್ದ್ಯಾಕ.

ಎ:- ಅಂಗ ಅಲ್ರಿ, ಆ ಲಿಗಾಟನರಿ ಏನ ಇದ್ದದ್ದೆಲ್ಲ. ಇಲ್ಲಿದ್ರ ನಮ್ಮ ದಣಿ ದರ್ಮರಾಯ ಇದ್ದಾಂಗ್· ಒಂದು ಪಿಟ್ ಅಂದಾತಲ್ಲ.

ಶ್ರೀ:- ಲಿಗಾಟ ಏನು?

ಎ:- ಲಿಗಾಟ ಅಂದ್ರ, ನಮ್ಮ ದಣಿ ಎಡ್ಡೊರಸ ಊರಾಗ ಇದ್ದಿಲ್ಲ. ಇರೇ ಅವ್ವನೋರ ಮೈಯ್ಯಾಗ ಬಾಳ ನೆಟ್ಟಗಿದ್ದಿಲ್ಲ. ಅಕಸುಧ್ಧಾ ಕೊಡಸಾ

ಕಂತ್ತ ಐದ್ರಾಬಾದ್ನಾಗ ಇದ್ದರು. ಆ ಎಡ್ಡ ವರ್ಸ ತಮ್ಮ ಗುಮಾಸ್ತರನ್ನ ಕಳಿಸಿ, ತಮ್ಮ ಪಾಲಿನ ಕಾಳು ಕಡಿ ಎಲ್ಲಾ ಮಾರಾಟ ಮಾಡಿಸಿಗೆಂಡರು. ಸಾಗೋಳಿ ರಕಮೂನು ಅವರಿಗೇ ಕೊಟ್ವಿ, ಅದರ ಲೆಕ್ಕಾ ತಗಲಬಿದ್ದೈತೆ.

ಶ್ರೀ:– ರಕಮು ಕೊಟ್ಟು ಪಾವತಿ ತಗೋಳಿಲ್ಲ ನೀ?

ಎ:– ಇಲ್ಲೆಪ್ಪ, ನಾವೆಲ್ಲಿ ಪಾವತಿ ತಗೋತೀವಿ?

ಶ್ರೀ:– ಆ ಗುಮಾಸ್ತ ಎಲ್ಲಿ ಇದ್ದಾನ ಈಗ?

ಎ:– ಆತ ಎಲ್ಲೆದನಾ ಏನೊ ಎಪ್ಪಾ. ಐದ್ರಾಬಾದಿನಿಂದ ಬಂದಿದ್ದ. ಗೌಡರ ಸಮುಕ್ಷಮ ರೊಕ್ಕ ಕೊಟ್ಟೇನಿ. ಕಾಳೀನೋ ಅವರಿಬ್ಬರೂ ಕೂಡಿ ಸಾಹುಕಾರನ ತಾಗ ಮಾರಿದರು. ಕಾಳು ಕಡಮಿ ಆದ್ವು ಅಂತ ಅಪ್ಪ ಈಗ ಸಿಟ್ಟಾಗ್ಯೆನ.

ಶ್ರೀ:– ಗೌಡ ಏನಂತಾನ?

ಎ:– ಏನ ಹೇಳಬೇಕೆಪ್ಪ, ದೊಡ್ಡೋರ ಕೆಲಸ. ಗೌಡರು ಈಗ ಮೈಗೆ ಅಚ್ಚಗೆವಲ್ಲರು. ದಣಿ ಅಂತೂ ಸಿಟ್ಟಾಗೆ ಬಿಟ್ಟಾನ. ಒಲಾ ಆಗಲೇ ಕಲ್ಲೂರ ಚೆನ್ನಬಸಪ್ಪಗ ಕೊಡಬೇಕಂತ ಮಾತ ಆಗ್ಯಾವಂತ.

ಶ್ರೀ:- ಈ ಹೊಲಾನ ಕೇಶವರಾಯರು ತಮ್ಮ ಅಳಿಯಗ ವರದಕ್ಷಿಣಿ ಯೊಳಗ ಕೊಟ್ಟಿರಬೇಕಲ್ಲ?

ಎ:– ಔದೆಪ್ಪ.

ಶ್ರೀ:- ಅವರ ಅಳಿಯ ನಾಳೆ ಕೂಸಿನ್ನ ನೋಡಲಿಕ್ಕೆ ಬರೋವ್ರು ಇದ್ದಾರಂತ. ಅವರಿಗೆ ಹೇಳಿ ಬಗಿಹರಿಸೋಣಂತ.

ಎ:- ಅಂಗ ಮಾಡೆಪ್ಪ. ಯಾರಿಗ್ಯಾರ ಏಳಿ. ಒಟ್ಟು ನಮ್ಮ ದಣೀಗೆ ಅಂತಕಣ್ಣಾ ಬರಂಗ ಮಾಡಿದರ ಸಾಕು.

**ಶ್ರೀ:– ಇದೂ ಬಗೆಹರಿಯಲಿಲ್ಲಾಂದರ ಪಂಚಾಯತಿ ನೆರೆಸೋಣಂತ. ಒಟ್ಟ ನಿನಗ ಅನ್ಯಾಯ ಆಗದಿದ್ದರ ಆಯಿತು. ಒಳ್ಳೇದು ನಾ ಮತ್ತೆ ಬರತೇನಿ.**

ಏ:- ನಾಳೆ ನಿಂತಾಗ ಬರಲೇನೆಪ್ಪ.

ಶ್ರೀ:– ನಾನು ಹೇಳಿಕಳಿಸಿದರ ಬಾ. ಅಂಗ ಮಾಡಿರಿ. ಶರಣೆಪ್ಪ.



[ ೨ ]

[ ಮೂರನೆಯ ದಿನ ನಾಲ್ಕು ಗಂಟೆಯ ಸಮಯ. ಕೇಶವರಾಯರ ಮನೆ. ಪುರುಷೋತ್ತಮ, ವಿಮಲಾ ಮಾತಾಡುತ್ತ ಕುಳಿತಿದ್ದಾರೆ.]

ವಿಮಲಾ:- ನೀವು ಬರತೀರೋ ಇಲ್ಲೋ ಅಂತ ಮಾಡಿದ್ದೆ.

ಪುರುಷೋತ್ತಮ:- ಹೌದು ಹಾಗೇ ಇತ್ತು. ನಾಲ್ಕು ದಿವಸ ರಜಾ ಸಿಕ್ಕದ್ದೇ ಹೆಚ್ಚು. ಲೇವಿ ಕೆಲಸ. ಅದರೊಳಗ ಮೊನ್ನೆ ಮೊನ್ನೆ ತಹಶಿಲ್ದಾರಿ ಬ್ಯಾರೆ ಸಿಕ್ಕದ.

ವಿ:- ಅಂದರೇನು ತಹಶಿಲ್ದಾರಿ ಒಳ್ಳೇ ಜೋರ ಮ್ಯಾಲ ಅದಽ ಅನ್ರಿ.

ಪು:- ಜೋರ್ ಏನು? ತಿರಗಬೇಕಲ್ಲ ಹಳ್ಳಿಹಳ್ಳಿ. ಬಡಜನಕ್ಕ ಗೋಳ ಅದ. ಎಲ್ಲಾ ತ್ರಾಸ. ಲಂಚಾಗಿಂಚಾ ಅನಕಾ ನನಗ ಆಗಿ-ಬರೋದಿಲ್ಲ.

ವಿ:- ನಿಮ್ಮದನಕಾ ಸದಾ ಇದಽ ಆತ್ಯು, ಹಿಂಗಾದರ ಗಳಸಿತೀರಿ ಹ್ಯಾಂಗ. ಮುಂದಿನ ಚಿಂತಿ ಬ್ಯಾಡ?

**ಪು:- ಏನು ಲಂಚಾ ತಿನ್ನ ಅಂತಿ? ಬಡವರ ಗೋಳ ಇಟಗೊಂಡು.**

ವಿ:- ಅವರನ್ನ ಯಾಕ ಗೋಳಾಡಿಸಬೇಕು?

ಪು:- ಅವರನ್ನ ಗೋಳಾಡಸದ ಹೊರತು ಲಂಚಾ ಸಿಗೋದೇ ಇಲ್ಲ.

ವಿ:- ಬಡವರನ್ನ ಬಿಡಬೇಕು. ನೆಟ್ಟಗಿದ್ದವರ ಕಡಿಯಿಂದ ತಗೋಬೇಕು.

ಪು:- ನೆಟ್ಟಗಿದ್ದವರು ನಮಗ ಕೊಟ್ಟು, ಅವರು ಬಡವರಿಂದನ್ನ ವಸೂಲು ಮಾಡೋದು ಗೊತ್ತದನ. ಅಂತು ಕೊನೀಗೆ ಬಡವರ ಮ್ಯಾಲೆ ಗದಾಪ್ರಹಾರ.

ವಿ:- ಏನೋರಿ ನನಗೇನು ತಿಳಿಬೇಕು. ಅದು ಹ್ಯಾಂಗ ಸರೀನೋ ಹಂಗಮಾಡಿರಿ.

ಪು:-ಹಾಂ! ಹಾಂಗ ಹೇಳು. ಬಡವರ ಉಸುರು ತಟ್ಟಬಾರದು ಬಹಳಕೆಟ್ಟ ಅದು.

ವಿ:- ಆದರಾತು ಬಿಡಿರಿ. ದವರಾದೊಳಗ ಕಷ್ಟ ಬಡಬ್ಯಾಡರಿ. ಅಡಗಿಯವನ್ನ ಇಟಗೊಂಡರೋ ಇಲ್ಲೊ ? ಕೆಲಸಾ ಅತಿ ಮಾಡಬ್ಯಾಡರಿ.

ಪು:- ಅಡಗಿಯವನ್ನ ಇಟಗೊಂಡೀನಿ. ಕೆಲಸಾ ಮಾತ್ರ ವಿಪರೀತ ಇರತದ. [ ಕೂಸು ಅಳುವುದು. ವಿಮಲಾ ಸಮಾಧಾನ ಪಡಿಸುವಳು. ]

ಪು:- ಇವಾ ಪೂರಾನನ್ನ ಹೋತಾನ.

ವಿ:- ನಿಮ್ಮನ್ನ ಹೋತದ್ದಕ್ಕ, ಆವನಿಗೆ ಏನ ತಂದೀರಿ ಹೇಳಿರಿ.

ಪು:- ನಾನೇ ಸ್ವತಃ ಬಂದಿರೋ ಮುಂದ ಅದೂ ಇದೂ ಏನ ತರೋದ ಅದ. ಹೌದಿಲ್ಲೋ ಏ ಪುಟ್ಯಾ, ಛೀ ನಿನ.

ವಿ:- ಅಂದ ಹಾಂಗ ನಾನು ಬರೆಸಿದ್ದೆನಲ್ಲ! ಬಂಗಾರದ ಉಡದಾರ ತರಲಿಲ್ಲ ?

ಪು:- ವ್ಹಾ! ಅವರ ಮುತ್ಯಾ ಕೊಡತಾನೇನಲ್ಲ.

ವಿ:- ಅವರು ಕೊಡೋಹಾಂಗ ಕೊಡತಾರ. ನೀವು.

ಪು:- ನಾನು ಬಡವ.

ವಿ:- ಬಡವರಾಗಲಿಕ್ಕೆ ಏನಂತ, ತಹಶಿಲ್ದಾರ ಆಗೀರಿ.

ಪು:- ಏನಾತ್ಯ! ಮೊನ್ನೆ ಮೊನ್ನೆ ಆಗೀನಿ ಆದರೂ ನಾ ಬಡವನ. ಹಾಂ! ಮತ್ತ ನಿನ್ನ ಹೊಲದ ರಕಮು ಬಂದಿರಬೇಕಲ್ಲ.

ವಿ:- ಅಯ್ಯೋ! ಅದು ಒಂದು ರಗಳೀನ ಆಗೇದ. ಹೊಲಾ ಮಾಡೂ ಅವಾ ೪-೫ ವರ್ಷದಿಂದ ರಕಮೇ ಕೊಟ್ಟಿಲ್ಲಂತ. ಅದಕ ಅವನ್ನ ಬಿಡಿಸಿ ಇನ್ನೊಬ್ಬರಿಗೆ ಕೊಡತಾರಂತ.

ಪು:. ಬಿಡಿಸತಾರಂತ? ಹಿಂದಿನ ರಕಮು?

ವಿ:- ಅಂವಾ ಕೊಡದಿದ್ದರ ತಾವೇ ಕೈಲೆ ಕೊಡತೀವಿ ಅಂತಿದ್ರು ಅಣ್ಣಾ.

ಪು:- ಅಂತು ವರದಕ್ಷಣಿಹೊಲಾ ಇಷ್ಟು ಕರಾಮತ ಮಾಡೇದ ಅನ್ನು. ಪಾಪ ಆ ಬಡವ ಎಷ್ಟೋ ವರ್ಷದಿಂದ ಆ ಹೊಲಾ ಮಾಡತಿದ್ದನೇನೋ.

ವಿ:- ಮಾಡತಿದ್ರ ಏನಾಯಿತು? ಹೊಲಾ ಎಲ್ಲಾ ಕೆಡಿಸಿಬಿಟ್ಟಾನಂತ. ಪುಂಡರ ಮಾತು ಕೇಳಿಕೊಂಡು ನಮ್ಮ ಪಾಲಿನ ಕಾಳೂನು ಸರಿಯಾಗಿ ಕೊಡವಲ್ಲನಂತೆ. ಸಾಗೋಳಿ ರಕಮೂನು ಸರಿಯಾಗಿ ಕೊಡವಲ್ಲನಂತ. ಹೊಲಾ ಹಸನ ಇಟ್ಟಿಲ್ಲಂತ.

ಪು:- ನೀನು ಹೊಲಕ್ಕ ಹೋಗಿದ್ದೇನು?

ವಿ:- ನಾನ್ಯಾಕ ಹೋಗಬೇಕು. ಅಣ್ಣ ಹೇಳಿದರು.

ಪು:- ಕಾಳಿನ ಲೆಖ್ಖಾನೂ ನಿಮ್ಮ ತಂದೀನೇ ನೋಡಿರಬೇಕಲ್ಲ! ಸಾಗೋಳಿ ರಕಮು ಕೊಡತಾ ಇಲ್ಲಾ ಅಂತ ಅವರೇ ಹೇಳಿರಬೇಕು! ಹೌದಲ್ಲೋ!

ವಿ:- ಅಂದರ ಏನು? ಅಣ್ಣ ನಮ್ಮ ಮ್ಯಾಲೆ ಸುಳ್ಳು ಹೇಳತಾರೇನು?

ಪು:- ನಾನೆಲ್ಲಿ ಹಾಂಗ ಅಂದೀನಿ.

ವಿ:- ನಿಮ್ಮ ಮಾತಿನ ಅರ್ಥ ಏನು?

ಪು:- ಏನೂ ಅರ್ಥವಿಲ್ಲದ ಮಾತು. ಆದರೂ ಅರ್ಥಕ್ಕ ಸಂಬಂಧಿಸಿದ ಮಾತು. ಅರ್ಥನೇ ಮತ್ತ ಅನರ್ಥ ಮಾಡೋದು. ಈ ಅರ್ಥ ತಂದೆ-ತಾಯಿ, ಗಂಡಹೆಂಡತಿ, ಅಣ್ಣ - ತಮ್ಮ ಯಾರನ್ನೂ ನೋಡೋದಿಲ್ಲ!

ವಿ:- ಅಯ್ಯ! ನಿಮ್ಮ ಸಾಹಿತ್ಯದ ಮಾತು ನನಗೇನು ತಿಳಿಯಬೇಕು ?

ಪು:- ಇದರಾಗ ಸಾಹಿತ್ಯ ಏನು ಬಂತು? ಅರ್ಥ,ದುಡ್ಡು ಎಲ್ಲರನ್ನೂ ಮರೆಸಿ ಜಗಳಕ್ಕ ಸಿಂದರಸತದ. ಅರ್ಥವೇ ಜಗಳದ ಮೂಲ.

ವಿ:- ನೀವು ತಹಶೀಲ್ದಾರ ಆಗಬಾರದಾಗಿತ್ತು. ಎಲ್ಯಾರ ಪುರಾಣಿಕ. ರಾಗಿದ್ದರ ನೆಟ್ಟಗಾಗತಿತ್ತು.

ಪು:- ಪುರಾಣಿಕ ಆಗಿದ್ದರ ನಿಮ್ಮಪ್ಪ ನಿನ್ನ ನನಗ ಕೊಡತಿದ್ದಿಲ್ಲ! ಈ ವರದಕ್ಷಿಣೆ ಹೊಲಾ ಸಿಗತಿದ್ದಿಲ್ಲ. ಹೊಲದ ರಕಮು ಬರಲಿಲ್ಲಾ ಅಂಬೋ ರಗಳಿ ಇರತಿರಲಿಲ್ಲ, ಹೌದಲ್ಲೋ ?

ವಿ:- ಅಬ್ಬಾ, ನಿಮ್ಮ ಸಂಗಡ ಮಾತಾಡಿ ಯಾರುಗೆಲ್ಲ ಬೇಕಂದರ. ,

ಪು:- ಹೋಗಲಿ ಬಿಡು. ಇದು ನೋಡು ಪುಟ್ಟು, ಛೀ ಇಲ್ಲಿ ನೋಡು ಹಾಂ! ಹಾಂಗ. ನಿನಗ ಉಡದಾರ ಬೇಕ? ಬಂಗಾರದ್ದ ಬೇಕ! ವ್ಹಾರೆ ವ್ಹಾ! ಆಗಲೆಪ್ಪ. ಮುಂದಿನ ತಿಂಗಳದಾಗ ತಗೊಳ್ಳೋಣ ಇಲ್ಲಿ ನೋಡ. ನಿಮ್ಮ ತಂದಿ ಅವರಿಗೆ ತೊಂದರಿ ಕೊಡಬೇಡ. ಹೊಲದ ರಕಮುಕೇಳಬೇಡ

ವಿ:- ನಾನು ಕೇಳೀ ಇಲ್ಲ. ತಾವೇ ಅಂದರು.

ಪು:- ಇವತ್ತ ನಾಳೆ ವಕೀಲೀನೆ ಬಿಟ್ಟಾರ, ಈ ಕಾಂಗ್ರೆಸ್ ಕೆಲಸ ದಾಗ. ಗಳಸೋದು ಕಡಮ್ಯಾಗೇದ. ಅವರಿಗೆ ತ್ರಾಸಕೊಡಬ್ಯಾಡ.

ವಿ:- ಅಣ್ಣಾಗ ತ್ರಾಸಕೊಡಬಾರದು. ಹೊಲದವನ್ನ ಕಷ್ಟಪಡಿಸಬಾರದು ಬಡವರಿಗೆ ತೊಂದರಿ ಕೊಡಬಾರದು. ಹೀಂಗಾದರ ನಿಮಗ ರೊಕ್ಕಾ ಬರೋದು ಹ್ಯಾಂಗ ?

ಪು:- ನನಗ ಸರಕಾರದವರು ತಿಂಗಳ ತಿಂಗಳಾ ಸಂಬಳ ಕೊಡತಾರ ಗೊತ್ತದನೋ ಇಲ್ಲೋ ?

ಪು:- ಓಹೋ ! ಹೀಂಗ !

[ಹೊರಗಿನಿಂದ ಶ್ರೀಕಂಠ ಬರುತ್ತಾನೆ. 'ಪುರುಷೋತ್ತಮರಾವ್'.]

ಪು:- ಬಂದೆ.

ವಿ:- ಈಗ ಮೂರು ದಿವಸದಿಂದ ಈತನಿಮ್ಮನ್ನ ಕೇಳಿ ಕೇಳಿ ಹೋಗತಾನ.

ಪು:- [ಅಂಗಿ ಹಾಕಿಕೊಂಡು] ! ಹಾಂ ಬಂದೆ [ಹೊರಗೆ ಬರುವನು ಪಡಸಾಲೆಯಲ್ಲಿ]

ಪು:- ನಮಸ್ಕಾರ, ಶ್ರೀಕಂಠಯ್ಯ ನೋಠಿಗೆ.

ಶ್ರೀ:- ನಮಸ್ಕಾರ ತಹಶೀಲ್ದಾರ ಸಾಹೇಬರೇ ಯಾವಾಗ ಬಂದಿರಿ ?

ಪು:- ಇವೊತ್ತೇ ಬೆಳಿಗ್ಗೆ. ಎಲ್ಲಾ ಕ್ಷೇಮ ?

ಶ್ರೀ:- ನಿಮ್ಮನುಗ್ರಹ. ಮಗನ್ನ ನೋಡೋದಕ್ಕೆ ದಯಮಾಡಿಸೀರೆಂತ ಕಾಣಸತದ.

ಪು:- ಹೇ ಹೇ ಹೇ [ನಗುವನು]

ಶ್ರೀ:- ಕೇಶವರಾಯರು ಮನೆಯೊಳಗ ಇಲ್ಲೇನು ?

ಪು:- ಅವರು ಯಾವುದೋ ಹಳ್ಳೀಗಹೋಗ್ಯಾರಂತ ನಾಳಿಗೆ ಬೆಳಿಗ್ಗೆ ಬರತಾರಂತ.

ಶ್ರೀ:- ಅನಕಾ ಮುಕ್ಕಾಂ ಅವನ ?

ಪು:- ನಾಳೆ ಒಂದು ದಿವಸ.

ಶ್ರೀ:- ನೀವು ಬರೋದೆ ಅಪರೂಪ.ಇರ್ರಿ ನಾಲ್ಕಾರು ದಿವಸ. ನೀವ ಇಲ್ಲಿಗೆಬರದ ನಾಲ್ಕಾರು ವರ್ಷ ಆಯತಲ್ಲ !

ಪು:- ಯಾಕೆ? ಹೋದವರ್ಷ ಬಂದಿದ್ದೆ. ನೀವೆಲ್ಲಾರೂ ಜೇಲಿನೊಳ ಇದ್ದಿರಿ.

ಶ್ರೀ:- ನಿಲ್ಲಿರಿ ಸರಿ. ಹೌದು.

ಪು:- ನೀವೆಲ್ಲಾರೂ ಜೇಲಿನೊಳಗ ಬಿದ್ದು ಕಷ್ಟ ಬಟ್ಟೆರೆಂತ ದೇಶ್ಕೆಲ್ಲ ಕಲ್ಯಾಣ ಆತ್ಯು.

ಶ್ರೀ:- ನಾವೇನು ಮಾಡೀವಿ ಬಿಡರಿ. ಹಿಂದುಸ್ತಾನ ಸರಕಾರ ಪೋಲೀಸ್ ಆ್ಯಕ್ಷನ್ ತಗೊಂಡಮು ಅಂತ ಆತ್ಯ.

ಪು:- ಅದು ಸರಿ. ಆದರೂ ನೀವೆಲ್ಲ ಜನರು ಪಟ್ಟು ಹಿಡಿದು, ಜನರ ಪ್ರತಿನಿಧಿಯಾಗಿ ನಿಂತು ಕಷ್ಟ ಸಹಿಸಿದ್ರಿ. ತತ್ಪರಿಣಾಮವಾಗಿ ಜನರ ವಿಮೋಚನಕ್ಕಾಗಿ ಪೋಲೀಸ್ ಆ್ಯಕ್ಷನ್ ಆಯಿತು.

ಶ್ರೀ:- ಅದೆಲ್ಲಾ ಆಯಿತನ್ರಿ. ಈಗ ಸ್ಥಿತಿ ಸುಧಾರಿಸಬೇಕಾಗೇದ. ಆಹಾರ ಪರಿಸ್ಥಿತಿ ಅನಕಾ ನಿಮಗ ಗೊತ್ತೇ ಅದ. ಎಲ್ಲಾ ಸಾಮಾನು ತುಟ್ಟಿ ಅಂದರ ವಿಪರೀತ ತುಟ್ಟಿ ಆಗೇವ. ಬೆಳಿಯೋದು ಕಡಮೆ ಆಗೇದ. ಹೀಂಗಾಗಿ ಒಕ್ಕಲಿಗರ ಪಾಡು ಹದಗೆಟ್ಟೆದ. ಮಳಿ ಅಂತೂ ಆಗೋದಿಲ್ಲ. ಆದರ ಅತಿವೃಷ್ಟಿ! ಇಲ್ಲಾ ಅನಾವೃಷ್ಟಿ! ಚೂರ ಚಾರು ಆದರೆ ಸಹಿತ ಉತ್ತಿ ಬಿತ್ತೋ ಕೆಲಸಾ ಮಾಡೋಲ್ಲ. ಜನರಿಗೆ ಎತ್ತಿಲ್ಲ. ಮಡಕಿ ಇಲ್ಲ. ಕುಂಟೆ ಇಲ್ಲ. ಕೆಲವರಿಗಂತೂ ಹೊಲಾನೇ ಇಲ್ಲ. ಮತ್ತ ಹೊಲಾ ಇದ್ದವರಿಗೆ ಮಾಡೋ ಶಕ್ತಿ ಇಲ್ಲ. ಹೀಂಗಾಗಿ ಬೆಳಿ ಎಷ್ಟು ಆಗಬೇಕೋ ಆಗವಲ್ಲವು.

ಪು:- ಹೌದ್ಹೌದು; ಆದರಾಗ ಅಣ್ಣ ತಮ್ಮಂದರು ಪಾಲಾಗಿ ಕೊನೆಗೆ ಹೊಲಾ ತುಣುಕು ತುಣುಕು ಚೂರು ಚೂರು ಆಗಿ ಅವು ದಿಕ್ಕಿಗೊಂದು ಆಗಿರತವ. ಇದಲ್ಲದ ಮೈಮುರುದು ದುಡಿಯೋರು ಕಡಮೆ ಆಗ್ಯಾರ. ಕೂತು ಕೊಂಡು ತಿನ್ನೋರೆ ಜಾಸ್ತ ಆಗ್ಯಾರ.

ಶ್ರೀ:- ಖರೇ ಮಾತು ಹೇಳಿದಿರಿ. ಉಂಡಾಡಿಗ ಮಂದೀಗೆ ಊರಾಗ ದಗದಾನೇ ಇಲ್ಲ. ಹೋಟೆಲ್ಲನ್ಯಾಗ ಚಾ,ಫರಾಳ–ಇಲ್ಲ, ಇಸ್ಪೇಟು, ನಾಟಕ. ಇಲ್ಲ ಜಗಳ, ತೋಟಿ. ಐಷ್ ಆರಾಮಿ. ಇದೊಂದು ತರದ ಮಂದಿ ಆತ್ಯ. ಇನ್ನ ನಾವು ಕಲತವ್ರು ಕೆಲವರು,ಇತ್ಲಾಗ ನಮ್ಮ ಹೊಲಾನೂ ಅ[illegible]ತ್ಲಾಗ ವ್ಯಾಪಾರ, ಧಂದೆ, ಇಲ್ಲ ವಕೀಲಿ, ನೌಕರೀ ಮಾಡತೀವಿ. ಹೊಲದ ಕಡೆಗೆ ನಮ್ಮ ಧ್ಯಾನ ಇರೋದಿಲ್ಲ. ಸುಮ್ಮನೆ ಬಂದಷ್ಟು ಬರಲಿ ಮಾಲ್ನೀ ಹಕ್ಕು ಅಂತ ಇರತೀವಿ. ಹೊಲಾ ಮಾಡಾವ್ರಿಗೂ, ನಮ್ಮ ಹೊಲಾ ಅಲ್ಲಾ ಅಂತ,

ಕಾಳಜಿಯಿಂದ ದಗದ ಮಾಡೋದಿಲ್ಲ. ಹೀಗಾಗಿ ಬೆಳಿ ಸರಿಯಾಗಿ ಆಗೋದಿಲ್ಲ.

ಪು:- ನಿಜವಾದ ಮಾತು. ಒಬ್ಬರು ಒಂದೇ ವೃತ್ತಿ ಮಾಡಬೇಕು. ಅಂದರ ಧನಾರ್ಜನೆಯ ಸಾಧನ ಕೇವಲ ಒಂದೇ ಇರಬೇಕು. ಒಂದರಕಿಂತ ಹೆಚ್ಚು ಸಾಧನಗಳಿಂದ ಧನಾರ್ಜನೆ ಮಾಡಬಾರದು.

ಶ್ರೀ:- ಮುತ್ತಿನಂಥ ಮಾತು. ಹಾಗಾದರ ಏನ ಕೇಳೀರಿ. ತಾವು ಹಿಡಿದ ಕೆಲಸಾನೂ ಸರಿಯಾಗಿ ಆಗ್ತೈದ. ಆ ಒಂದ ಕೆಲಸದೊಳಗ ನಿಪುಣ ಆಗಲಿಕ್ಕೆ ಬರತೈದ.

[ಎಲ್ಲಪ್ಪ ಮೇವಿನ ಹೊರೆಯನ್ನು ತಂದು ಅಂಗಳದಲ್ಲಿ ಹಾಕುವನು.]

ಪು:- ಈತಾ ನಮ್ಮ ರಾಮಪುರದ ಎಲ್ಲಪ್ಪನಲ್ಲ !

ಎ:- ಔದೆಪ್ಪ. ಸಲಾಮು ಯಾವಾಗಬಂದ್ರೆಪ್ಪ ?

ಪು:- ಇವತ್ತ ಮುಂಜಾನೆ ಬಂದೆ. ಏನ ಎಲ್ಲಪ್ಪ ನೆಟಗಿದ್ದೀಯಾ ?

ಎ:- ಇಾಗ ಅದೀವಿ ನೋಡ್ರಿ.

ಪು:- ನಾನಂತೂ ನಮ್ಮೂರು ರಾಮಪುರ ಬಿಟ್ಟೇ ಇದ್ದೀನಿ. ನೀನೂ ಪೂರಾ ಬಿಟ್ಟು ಇದೇ ಊರೊಳಗ ಇದ್ದಬಿಟ್ಟೇದಿ.

ಎ:- ಔದೆಪ್ಪ. ಏನ ಮಾಡಬೇಕು, ಇಲ್ಲೆ ದುಡೀತೀವಿ. ಇಲ್ಲೇ ಅದೀವಿ; ಅಪ್ಪನ ಒಲಾ ಮಾಡಿಕೆಂತ ನಮಗ ಎಲ್ಲೆ ಏನೆಪ್ಪ? ಭೂಮಿತಾಯಿ ಪದರಿಗೆ ಬಿದ್ದೋರು. ದುಡಿಬೇಕು. ತಿನಬೇಕು. ಏನದಿನದಿನಕ್ಕ ಕಾಲಾ ಮತ್ತೀಟು ನಾಜೂಕ ಆಗಾಕ ಅತ್ತಿದವು. ಅಲ್ಲ ಎಪಾ, ಈ ತುಟ್ಟಿ ಕಾಲಾ ಓಗಿ ಸೋಯಿ ಕಾಲ ಬರದೇ ಇಲ್ಲೆನೆಪ್ಪ ?

ಪು:- ನೋಡು ಎಲ್ಲಪ್ಪ ಕಾಲಾ ಏನಮಾಡೀತು. ಅದು ಇದ್ದಾಂಗ ಅದ ಅನ್ನು. ನಾವು ಮನಿಸೇರು ತಪ್ಪು ಮಾಡಿಕೊಂಡು, ಅದರ ಫಲದಿಂದ ಈ ತುಟ್ಟಿ ಬಂದದ.

ಶ್ರೀ:- ನಮ್ಮ ಪಾಪದ ಪರಿಣಾಮ ಅನ್ನರಿ.

ಎ:- ಆದರಾಗ ಅಳ್ಳೀ ಮುಂದಿ ಬಾಳಪಾಪ ಮಾಡ್ಯಾರ ಏನ ಬಿಡಿರಿ. ನಮ್ಮ ಕಷ್ಟ ಅಂದರ ಅದೇನ ಏಳ್ಯಾಕ ಇಲ್ಲ. ಎಪ್ಪಾ ಅದೇನಃ ಕಾಯದೇ ಬಂದೈತಂತಲ್ಲ.

ಪು:- ಏನ ಕಾಯದೇ, ಯಾತಕ್ಕ ?

ಎ:- ನಮ್ಮ ಯಜಮಾನ ಈ ಊರ ಸಾವುಕಾರನ ತಾಗ ನಮ್ಮ ದೊಂದು ಪಟ್ಟೇದ ಒಲಾನ ಒತ್ತಿ ಆಕಿದಾ. ಅವರ ಮನ್ಯಾಗ ದುಡ್ಯಾಕ ಇದ್ದ. ಒಲಾನೂ ಸಾವಕಾರರೆ ಉಣತ್ತಿದ್ದರು. ೭-೮ ವರ್ಷ ಉಃಡರು. ಮುಂದ ಅವರಿಗೇ ದಕ್ಕ ಆತ್ಯು, ಎಪ್ಪಾ, ನನ್ನ ಮದವಿ ತೆರವಿಗಂತ ಮುನ್ನೂರು ರೂಪಾಯಿ ಸಾಲಕ್ಕ ಒತ್ತಿ ಆಕಿದ್ನೆಪ್ಪ. ಬಡ್ಡಿಬಡ್ಡಿ ಕಲಿಸಿ ಏನೇನೋಮಾಡಿ ಒಲಾ ಅತ್ತಾಗ ದಕ್ಕಃ ಮಾಡಿಕೆಂಡರು.

ಶ್ರೀ:- ಕೇಳಿದಿರಾ ಇಂಥಾವು ನಿತ್ಯ ನೂತನವಾಗಿ ನಡೆದಿರತಾವ ಇಲ್ಲೆ.

ಪು:- ಹೌದ್ಹಾದು.

ಎ:- ಎಪ್ಪಾ, ನಮಗಂದರ ಊರಾಗ ಮನೀಇಲ್ಲ. ಅಡವ್ಯಾಗ ಒಲಾ ಇಲ್ಲ. ತಿನ್ನಾಃಕ ಕೂಳೀ ಇಲ್ದಾಂಗ ಕಂಗಾಲ ಆಗೀವಿ. ದುಡೀಬೇಕು ನಿಮ್ಮಂತವರ ತಾಗ, ಅವರಾಗಿ ಕೊಟ್ಟರ ತಿನಬೇಕು. ಅದಕ ಒಸಾ ಕಾಯ್ದೇವು ಏನ ಬಂದೈತಂತ. ಮತ್ತ ನಮ್ಮ ಒಲಾ ಸಾವಕಾರನ ಕಡಿಂದ ಕೊಡಸಾಕ ಬರದಿಲ್ರಾ ?

ಪು:- ಮತ್ತೆ ಸಾವಕಾರ ಕೊಟ್ಟ ಸಾಲ ?

ಎ:- ಎಂಟೋರಸ ಒಲಾ ಉಂಡಾರ ಮತ್ತ ನಮ್ಮ ಯಜಮಾನ ಎಂಟೋರಸ ಅವರ ಮನ್ಯಾಗ ದುಡದಾನ ಎಪ್ಪಾ.

ಪು:- ನೋಡ್ರಿ, ಶ್ರೀಕಂಠಯ್ಯ. ನಮ್ಮ ಸೆಟ್ಟರಿಗೆ ನೆಟ್ಟಗ ತಿಳಿಹೇಳಿ ಬಗೆಹರಿಸಬೇಕಿತ್ತು.

ಶ್ರೀ:- ನನ್ನಮ ಹೇಳೋದಂತೂ ನಡದೇ ಇರತದ ನೀವು ಹೇಳಿದರ ಹೆಚ್ಚು ಪರಿಣಾಮ ಆಗತೈದ.

ಎ:- ಔಡೆಪ್ಪ. (ಕಾಲಮೇಲೆಬಿದ್ದು) ನಿನ್ನ ಕಾಲ ಬೀಳ್ತೀನಿ. ಬಡವನ್ನ ಬದಕಿಸಿಗೋ ಭೂಮಿತಾಯಿ ಮಗ ನಾ. ನನ್ನ ವ್ಯಾಗ ಈಟು ಅಂತ ಕಣ್ಣಾ ಮಾಡು ಮಕ್ಕಳಂದಿಗಾ.

ಪು:- ಆಗಲಪ್ಪ ಹೇಳತೀನಿ. ಹೇಳತೀನಿ ಏಳು ಕಾಲ ಬಿಡು.

ಎ:- (ಬಾಷ್ಪ ಪೂರಿತನಾಗಿ, ಗದ್ಗದ ಕಂಠದಿಂದ) ಎಪ್ಪಾ, ದೇವರ ಬಂದಾಂಗ ಬಂದೀ ದಿ ನೀ ಏಳಿ ಓಲಾ ಕೊಡಿಸಿ ಓಗು. ವ್ಯಾಗಡೆ ಎಲ್ಲಾ ಇಂತಾ ಒಲಗೊಳನೆಲ್ಲಾ ಸಾವಕಾರಿಂದ ಒಕ್ಕಲಿಗೇರಿಗೆ ಕೊಡ್ಸ್ಯಾರಂತಲ್ಲೆಪ್ಪ ಸರಕಾರದೋರು.

ಪು:- ಆಗಲಿ, ಆಗಲಿ.

ಶ್ರೀ:- ಅದಂತೂ ಸರಿ. ನಿಮ್ಮ ರಾಯರಿಂದನೂ ಎಲ್ಲಪ್ಪಗ ಉಪಕಾರ ಆಗಬೇಕಾಗೇದ.

ಎ:- ಇರಲಿ ಬಿಡು ಎಪ್ಪ ಈಗ ಯಾಕ ಆ ಸುದ್ದಿ ?

ಶ್ರೀ:- ಬಂದಾರ ಇವರಕಡಿಂದ ಕೆಲಸಾ ಮಾಡಿಸಿಕೊಂಡು ಬಿಡೋದು ನೆಟ್ಟಗಲ್ಲ?

ಎ:- ಇದೇ ದಣಿ ಕಾಲ ವ್ಯಾಲೆ ಬಿದ್ದು ಏಳಿಕೆಂತೀನಿ ಬಿಡಪ್ಪ. ಮತ್ಯಾಕ.

ಪು:- ನಿನ ಸುದ್ದಿ ನಾನು ನಿನ್ನೆ ಕೇಳಿದೆ ಎಲ್ಲಪ್ಪ. ನೀನು ಹೊಲಾ ಬಹಾಳ ಕೆಡಸಿದೆಂತ.

ಎ:- (ದೈನಾಸದಿಂದ) ಕೆಡಸಾಕ ನಾ ಏನ ಮಾಡೀನ್ರಿ. ಓದ ವರ್ಸ ಅವನವ್ವನು ಮಳಿ ಅಂದರ ಮಳಿ ಅಸಾದ್ಯ ಆತ್ಯು. ಬೆಳಿ ಅನಕಾ ಕೆಟ್ಟು ಓದ್ವು ಬರೇ ಮನಿಸೇನೆತ್ತರ ಉಲ್ಲು, ಅಲಬು ಬೆಳದ ನಿಂತೈತಿ. ನಮ್ಮದೊಂದು ಒಲಾ ಏನ್ರಿ? ಜಾಡಿ ಊರ ಮಂದಿ ಒಲಾನ ಇಂಗ ಆಗ್ಯಾವ ನಮ್ಮ ಯಜಮಾನ ಬ್ಯಾರೆ ವಂಟವಾದ ನಮ್ಮದೊಂದು ಎತ್ತುನೂ ಸತ್ಯು. ಇಂಗಾಗಿ ಅಂಗ ಉಳದೈತಿ. ರಂಟೆಮಡಕಿ ಕಟ್ಸಿಸ ಬಿಟ್ಟರ ಬೇಸ್ ಪಸಂದ ಆಗ್ತೈತಿ.

ಪು:- ಹೋದವರ್ಷಾದ್ಹಾತು. ಅದಕ್ಕಿಂತ ಮುಂಚೆ.

ಎ:- ನೋಡ ಎಪ್ಪಾ. ಇದೇ ದಣಿ ಒಲಕ್ಕ ಮಾಗಿ ಮಾಡಂತ ಕುಂತಾನ. ಇಂದಕಂದ್ರ ಕಾಲ ಪಾಡಿದ್ವು. ಗಳ್ಯಾನೂ ಸೋವಿ ಸಿಗತಿದ್ದವು. ಆಗ ಎಡ್ಡ ಸಾರೆ ಮಾಗಿ ಮಾಡಿದೆ. ಈಗೂನು ಅಂಗೆ ಮಾಡಂದ್ರ ಕೈಲೆ ಆಗಾಕಿಲ್ಲ.

ಪು:- ಹಿಂದಕೆಲ್ಲ ಅರ್ಧ ಖರ್ಚು ಕೊಟ್ಟಾರಂತ ಕಾಣಸತದ.

ಎ:- ಔದೆಪ್ಪ ಆದರ ಈಗ ಅರ್ದ ಕೊಟ್ಟರೂ ನನ ಕಡಿಂದ ಆಗ ದಂಗ ಆಗೈತಿಲ್ಲ. ಏನ ಮಾಡಬೇಕು ? ಕಾಲ ಇಂತಾವು ಬಂದಾವೆಪ್ಪ. ಇಲ್ಲದ್ರ ಭೂಮಿತಾಯೀಗೆ ಮಾಡಾಕ ನಾ ಒಲ್ಲೆಂತೀನ?. ಆಕೀಗ ಮಾಡಿದಟೂಪಾಡ ಒಂದಕ್ಕ ನಾಕ ಮಾಡಿ ಕೊಡತಾಳ. ಅದರಾಗ ಅಪ್ಪಗೂ, ಈಗ ಈ ಕಾಂಗ್ರೇಸ ಕೆಲಸದಾಗ ವಕೀಲಿ ದಗದಾ ಬಿಟ್ಟಂಗ ಆಗೈತಿ. ಆತಗೂ ಕೈತುಸಾ ನಿಂತೈತಿ.

ಪು:- ಮತ್ತೆ ಅಂದ ವ್ಯಾಲ ನೀನೆ ಯಾರನಾರ ಕಲಿಸಿಕೊಂಡು ಮಾಡಬೇಕು. ಭೂಮಿ ಹಸನ ಮಾಡಬೇಕು.

ಎ:- ಯಾರನ್ನ ಕಲಿಸಿಗೆಂಡರ ಏನೈತಿ ಎಪ್ಪ. ಎಲ್ಲಾ ಹನ್ನೆಲ್ಡು ಲಿಗಾಟ ಆಗ್ತಾವ. ಟಕಾವಿ ಪಿಕಾವಿ ಏನಾರಸಾಲ ತಗದು ವೈನು ಮಾಡಿಕೊಟ್ಟರ ಮಾಗಿ ಆಗ್ತೈತಿ. ಅಪ್ಪನ ಮನಸ್ಸಿಗೆ ಬರೋಲ್ಡು. ನೀನಾರ ಈಟು ಏಳಿದರ ಪಾಡಾಗತೈತಿ.

ಪು:- ನಾ ಹೇಳೋದೇನು? ನೀನೇ ಹೇಳು· ಕೆಲಸ ಆಗತದ.

ಎ:- ಇಲ್ಲೆಪ್ಪ ಅಪ್ಪ ನನ ವ್ಯಾಗ ಸಿಟ್ಟಾಗ್ಯಾನ. ಆಗಲೇ ಆ ಕಲ್ಲೂರು ಚನಬಸಪ್ಪಗ ಮಾತು ಕೊಟ್ಟಾನಂತ. ಇನ್ನ ಆತ ಕುಂಟಿ ಕಟ್ಟಾಂವಾ.

ಪು:- ಮತ್ತ ನೀ ಇನ್ನೂ ಮೇವ ತರತೀದಿ. ಮಾಡತೀದಿ. ನಡದೇ ಅದಲ್ಲ ಅದ್ಯಾಕ ಬಿಡಸತಾರ.

ಎ:- ಈ ಮೇವು ಇಂದಿನ ಬಾಕಿ. ಅಪ್ಪನ ಪಾಲಿಂದು ನನ್ನ ದನಕ್ಕ ಬಳಸಿಕೆಂಡಿದ್ದೆ. ದನಕ್ಕ ಪೂರಾ ಮೇವಿಲ್ಲಂತ ಅವ್ವ ಎಳಕಳಿಸಿದ್ಲು. ಅದಕ ಮತ್ತ ಒಬ್ಬರ ತಾಗ ಕೈಗಡ ಇಸಗಂಡ ತಂದ ಆಕೀನಿ.

ಕ:- ನೀ ಏನು ಮಾಡತೀಯೋ ಅವನ್ನ ತಗೊಂಡು? ಸೀತಾ ನೀನು ಶಕುಂತಳಾನ ಮನೀಗೆ ಹೋಗಿ ಬರಕೋತ ಕೂಡು ಹೋಗು. ಇವನ ಕಿಡಿಗೇಡಿತನ ಕಾಡುನೋದು ನೋಡಲಾರೆ.. (ಸೀತಾ ಹೋಗುವಳು)

ಕೃ:- ಬಿಡತೀನೇನೋ. ನಾನು ಕಸಗೊಂಡು ಬರತೀನಿ. ( ಅವಳ ಹಿಂದೆ ಹೋಗಲು ಪ್ರಯತ್ನಿಸುವನು.)

ಕ:- (ಅವನನ್ನು ತಡೆದು) ಯಾಕೋ ಉನ್ಮತ್ತಾ. ಅವಳ ಸಂಗಡ ಯಾಕೋ ಗುಮುಮುರುಗಿ? ನಾನು ಏನಂತಾನೋ ಅಂತ ಮಾಡೀನಿ. ಸುಮ್ಮನೆ ಕೂತು ಓದಬಾರದೇನೊ ! ಆಕಿನ್ನ ಯಾಕ ಗೋಳಾಡಸತೀದಿ?

ಕೃ:- ನನ್ನ ಪೆನ್ ಯಾಕ ತಗೋಬೇಕು ಮತ್ತ?

ಕ:- ನಿನ್ನದಂತಯಾರು ಹೇಳಿದರು? ಅವಳದಶಿಂದಂತ ತಂದಾರಅದನ್ನ

ಕೃ:- (ವ್ಯಂಗವಾಗಿ)ಊಂ. ಆಕಿ ದಶಿಂದ ತಂದಾರ ಅದನ್ನ

ಕ:- ಯಾರ ದಸಿಂದೂ ತಂದಿಲ್ಲಪಾ. ಅವರದೇ ಅದು. ಬರೀಲಿಕ್ಕೆ ಅಂತ ಕೊಟ್ಟಾರ ಆಕಿಗೆ. ಆತ ಯಾಕ ಜಗಳ.

ಕೃ:- ಅಪ್ಪ ಕೊಟ್ಟಿಲ್ಲ. ತಾನೇ ಜೇಬಿನೊಳಗಿಂದ ಎಬ್ಬಿಸ್ಯಾಳ.

ಕ:- ನಾನೇ ಆಕಿಗೆ ತಗೋ ಅಂತ ಹೇಳಿದ್ದೆ.

ಕೃ:- ಅಪ್ಪಾ, ನಂದೂ ಅಂತ ಹೇಳ್ಯಾನ.

ಕ:- ನೀನು ಅಳತೀದಿ ಅಂತ ಹಾಂಗ ಹೇಳ್ಯಾರ.

ಅನಂತರಾಯ:- (ಪ್ರವೇಶಿಸಿ) ಏನ ಅದು ಗದ್ದಲ.

( ಕೃಷ್ಣ ಹೊರಗೆ ಓಡಿ ಹೋಗುವನು. ಅನಂತರಾಯರು ಪಲ್ಯಕಾಯಿಯನ್ನು ಕಮಲಾಬಾಯಿಯ ಎದುರಿಗೆ ಸುರುವನು) ಯಾಕ ಅಂಪಾ ಓಡಿದನಲ್ಲ. ಅವನ್ನ ರೇಗಿಸಿದೇನು? ರೇಗಿಸಬ್ಯಾಡ ಅವನ್ನ.

ಕ:- ಅವನ ಕಿಡಿಗೇಡಿತನ ನೋಡಿದರ ತಿಳಿದೀತು. ಸೀತಾನ್ನ ಅಳಿಸಿ ಕಣ್ಣೀರು ಕಪಾಳಕ್ಕ ಇಳಸತಾನ. ಈ ಗಂಡು ಜಾತೀನೇ ಹೀಂಗೋ ಏನೊ.

ಮತ್ತ್ಯಾಕ ಈ ರೋಷ! ಆಃ! ತಲೆ ಅಲ್ಲಾಡಿಸತಿದೀಯಲ್ಲ! ಏನು? ನೀನು ಭಾರತಮಾತಾ ಅಲ್ಲ? ಮತ್ತೆ ಯಾರು ತಾಯಿ ನೀನು? ಭೂ. ಅಂದರ ಭೂದೇವಿ-ಭೂಮಾತಾ. ಹಾಂ! ಹಾಃ! ಹಾಂ! ಹಾಂ! ನೀನು ನೀನು ನೀನು ನೀನು ಭೂಮಿತಾಯಿ. ಯಾಕ? ಇಷ್ಟ್ಯಾಕ ರೋಷ? ಶಾಂತಳಾಗು. ನಾನು ಬಡವ, ಸೇವಕ ಅಲ್ಲ? ಅಲ್ಲ? ಹೂಂ! ಹೂಂ! ಏನಂದಿ ತಾಯಿ? ನಿನಗ ಗಾಯಮಾಡ್ಯಾರ! ಅಯ್ಯೋ ಗಾಯ ಗಾಯಗಳು ಅಯ್ಯೋ! ಯಾವ ನೀಚರು ಹೀಗೆ ಗಾಯಗೊಳಿಸಿದವರು? ಹಾ! ಹಾ! ರಾಮಾ ರಾಮಾ! ಬ್ಯಾಡತಾಯಿ ನೋಡಲಾರೆ ಮುಚ್ಚಿಕೋ ಗಾಯವನ್ನು ಆ ಪಾಪಿಗಳು ನಾಶ ವಾಗತಾರೆ. ಅಳಬೇಡ ತಾಯಿ. ಬೇಡ ಏನು? ಹಾಂ, ನಿನ್ನ ಮಕ್ಕಳು ಏನಾದರು? ಕೂಳಿಲ್ಲದ, ಅನ್ನ ಇಲ್ಲದ ಕಂಗಾಲಾಗ್ಯಾರ? ಅವರ ಮ್ಯಾಲ ಅನ್ಯಾಯ? ಹೌದು. ಆದರ ಅಲ್ಲ ತಾಯಿ. ಹಾಂ! ಹಾಂ, ಹೌದು ನಾನೇನು ಮಾಡೇನು? ಅಲ್ಪ ಶಕ್ತಿಯಿಲ್ಲ ಏನೂ! ಷಂಢ ಅಂತೀದಿ! ಹಾಗೆನಬೇಡ ತಾಯಿ, ಭೂಮಾತಾ ನಾನೂ ನಿನ್ನ ಮಗನೇ! ನಿನ್ನ ಮಕ್ಕ ಳೆಲ್ಲ ಹೀಂಗ ಆಗ್ಯಾರಂತೀ! ಅಲ್ಲ. ಅಲ್ಲ. ಹಾಗೆನ ಬೇಡ. ಬೇಡ. ಸ್ಥೈರಿಸು ಏನಂದೆ? ಏಳಲಾ? ಅದೇನು ದಂಡವೇ? ಶಾಸನ ದಂಡ! ನಾನು ತೆಗೆದು ಕೊಳ್ಳಲಿ? ತಾಯಿ, ತಾಯಿ, ನಿನ್ನ ಆಶೀರ್ವಾದ, ಇದೋ ತಾಯಿ, ತಾಯಿ, ಎಲ್ಲಿಗೆ ಹೋದೆ? ತಾಯಿ ತಾಯಿ (ಚೀರುತ್ತ ಮುಗ್ಗಲಾಗುವನು.)

(ಚೀರುತ್ತಿರುವಾಗಲೇ ಪಕ್ಕದ ಕೋಣೆಯಿಂದ ಕೇಶವರಾಯರ ಪ್ರವೇಶ.)

ಕೇಶವ:- ಪುರುಷೋತ್ತಮ! ಪುರುಷೋತ್ತಮ! ಎಚ್ಚರಿಕೆ ಮಾಡಿ ಕೋ ಅಪ್ಪ! ತಾಯೀನ್ನ ಕಳಕೊಂಡು ಪರದೇಶಿ ಆಗೀದಿ, ತಾಯಿ ತಾಯಿ ಅಂತ ಬಡ ಬಡಸತೀದ್ಯಾ! ಏನ ಮಾಡಬೇಕು? ಆಕೀಗೆ ಭಾಗ್ಯ ಇಲ್ಲ. ನೀನು ತಹಶೀಲ್ದಾರ ಆಗಿದ್ದು ನೋಡಿ, ಮೊಮ್ಮಗನ್ನ ನೋಡಿ ಸಂತೋಷ ಬಡತಿದ್ದಳು!

(ಪುರುಷೋತ್ತಮ ಕಣ್ಣುಜ್ಜಿಕೊಂಡು ಆಕಳಿಸುತ್ತ ಎದ್ದು ಕುಳಿತು ಕೊಳ್ಳುವನು. ಕಣ್ಣಲ್ಲಿ ನೀರು ಉದುರುತ್ತಿದೆ.)

ವಿಮಲಾ:- (ಗಡಬಿಡಿಯಿಂದ ಪ್ರವೇಶಿಸಿ) ಯಾರು ಚೀರಿದವರು! ಅಣ್ಣಾ ಇವರೇ ಏನು ಇಷ್ಟು ಕೂಗಿದವರು?

ಕೇ:- ಹೌದು ಏನೋ ಕನಸು ಬಿದ್ದಿತ್ತಂತ ಕಾಣ್ಸತದ.

ವಿ:- (ನೀರಿನ ಗ್ಲಾಸು ಕೊಡುತ್ತ) ಇದು ತಗೊಳ್ರಿ ಕಣ್ಣಿಗೆ ನೀರು ಹಚ್ಚಿಗೊಳ್ರಿ. ಅಯ್ಯಯ್ಯ! ಕಣ್ಣಾಗ ನೀರ್ಯಾಕ ಅಂದರ!

ಪು:- (ಪಕ್ಕಕ್ಕಿದ್ದ ಪುಸ್ತಕವನ್ನು ಎದೆಗವಚಿಕೊಂಡು, ನಿಟ್ಟುಸಿರು ಬಿಡುತ್ತ) ಹೌದು! (ಕಣ್ಣಿಗೆ ನೀರು ಹಚ್ಚಿಕೊಳ್ಳುವನು.)

ವಿ:- ಆ ಪುಸ್ತಕಾನ್ನ ಇಷ್ಟ್ಯಾಕ ಎದೆಗವಚಿಕೊಂಡೀರೆಂದರು. ಕೊಡಿರಿ ಇಲ್ಲೆ (ಕಸಿದುಕೊಳ್ಳುವಳು)

ಕೇ:- (ಆ ಪುಸ್ತಕವನ್ನು ತೆಗೆದುಕೊಂಡು ನೋಡಿ) ಓಹೋ, "Land Reforms in Independent India"; ಉತ್ಕೃಷ್ಟ ಪುಸ್ತಕ

ವಿ:. ಯಾಕ ಅಂದರ ನೀವು ಇಷ್ಟು ಚೀರಿದಿರಿ.

ಪು:- ಕನಸು. ಭೂಮಿತಾಯಿ ದರ್ಶನ. ಕೆದರಿದ ಕೇಶರಾಶಿ. ಕೆಂಗಣ್ಣು ಚತುರ್ಭುಜ. ಮ್ಲಾನ ವದನ. ಶಸ್ತ್ರಧಾರಿ. ಆಕೆಯ ಮೈಯೆಲ್ಲ ಗಾಯ. ನನ್ನನ್ನು ಬೆದರಿಸಿದಳು. ಛೀಮಾಡಿದಳು. ಏಡಿಸಿದಳು. ಮೂದಲಿಸಿದಳು. ಕೊನೆಗೆ ಏಳೆಂದಳು. ಮಕ್ಕಳು ಉಪವಾಸದಿಂದ ಬಳಲುತ್ತಿದ್ದಾರೆ ಎಂದಳು. ನನಗಾದ ಗಾಯ ಮಾಯಿಸೆಂದಳು. ಇನ್ನೂ ಏನೇನೋ ಹೇಳಿ ಒಂದು ಶಾಸನ ದಂಡಕೊಟ್ಟು ಬೆನ್ನು ಚಪ್ಪರಿಸಿ ಮಾಯವಾದಳು.

ವಿ:- ಅಯ್ಯ! ಇವತ್ತ ಸಂಜೀ ಮುಂದ ದ್ಯಾಮವ್ವನ ಗುಡೀಗೆ ಹೋಗಿ ಕಾಯಿ ಒಡಿಸಿಗೊಂಡು ಅಂಗಾರ ತಗೊಂಡು ಬರತೀನಿ.

ಕೇ:- ಹುಚ್ಚಕ್ಕ, ಈ ಪುಸ್ತಕ ಈ ಕನಸಿಗೆ ಕಾರಣ ಇರಬೇಕು.

ವಿ:- ಏನ ಅದ ಅದರಾಗ?

ಕೇ:- ಭೂಮಿ ಅಂದರ ಹೊಲಾ, ಈಗೇನು ಅಣ್ಣತಮ್ಮಂದಿರು ಹಂಚಿಗೊಂಡು ತುಂಡು ಆಗೇವಲ್ಲ, ಅವನ್ನೆಲ್ಲಾ ಒಂದುಗೂಡಿಸಿ, ಹೊಲದಾಗ ಕೆಲಸಾ ಮಾಡಾವರಿಗೆ ಹೊಲಾ ಕೊಡಸಬೇಕು. ಇದರಿಂದ ಜನರಿಗೆ ಸುಖ ಆಗತದ ಅಂಬೋದೇ ಈ ಪುಸ್ತಕದ ತಾತ್ಪರ್ಯ.

ವಿ:- ಹೌದ ಅಣ್ಣಾ! ನಮ್ಮ ಎಲ್ಲಪ್ಪನ ದಶಿಂದನೂ ಇವರು ನಿಸಿನಿಂದಾ ಅಂದೇ ಅಂತಾರ; ಬಡವರಿಗೆ ಹೊಲಾ ಬಿಡಿಸಬಾರದೂ ಅಂತ ಈ ಪುಸ್ತಕಾ ಬ್ಯಾರೆ ಓದ್ಯಾರ. ಎದಿ ವ್ಯಾಲಿಟುಗೊಂಡ ನಿದ್ದಿ ಹಚಿಗೊಂಡಾರ. ಅದೇ ಕನಸಂತ ಕಾಣಸತದ. ಮತ್ತಿನ್ನೇನದ. ಥೂ ನಿಮ್ಮ, ಮನಸಿಗೆ ಎಷ್ಟು ಹಚಿಗೋತೀರಿ ಅಂದರ.

ಕೇ;- ಚಿಕ್ಕಂದಿನಿಂದ ಅವನ ಸ್ವಭಾವ ಹೀಂಗ ಬಹಾಳ, ಸರಳ.

ವಿ:- ಎಷ್ಟು ಗಹತರ ಅಂದರ ತಾಯೀ ಅಂತ ಚೀರಿದ್ದು ಒಳಗ ಅಡಿಗಿ ಮನೀಗೆ ಕೇಳಿಸಿತು. ಹೀಂಗ್ಯಾಕ ಕೂತೀರೆಂದರೆ ಸುಮ್ಮನೆ! ಮಾತಾಡವಲ್ರಿ!

ಪು:- ಆಂ!! ಹಾಂ!

ಕೇ:- ಪುರುಷೋತ್ತಮಾ. ನೀನು ಆ ಎಲ್ಲನ ಕಾಳಜಿ ಬಿಡು; ಹೊಲಾ ಬಿಡಿಸೋದಿಲ್ಲಾ, ನಿಶ್ಚಿಂತನಾಗು. ನನಗೇನಪ್ಪ, ನಿಮ್ಮೆಲ್ಲಾರ ಸಂತೋಷ ನನಗೂ ಸಂತೋಷ. ಅಷ್ಟು ಮನಸಿಗೆ ಹಚಿಕೋಬೇಡ.

ಪು:- ಇಲ್ಲ ಪಾಪ ಬಡವ ಅಂವಾ, ಈಗ ಬರತೀನಿ ಅಂದಿದ್ದಾ.

ಕೇ:- ಹೌದು, ಬಂದಾನ ಹೊರಗೆ ಹೋಗೋಣ ನಡಿ.

[ಇಬ್ಬರೂ ಹೊರಗೆ ಬರುವರು]

ಪು:- ಓಹೋ! ಬಂದೇನ ಎಲ್ಲಪ್ಪಾ!

ಎ:- ಔದೆಪ್ಪ ಸಾವಕಾರ ಕರೆಸಿದ್ದ ಓಗಿದ್ದೆ. ಅಲ್ಲಿಂದ ಇತ್ತಾಗ ಬಂದೆ ಎಪ್ಪಾ ನಿನ್ನ ದಯಾ ಆತ ನನ್ನ ಒಲಾ ನನಗ ಕೊಡತೀನಿ ಅಂತ ಏಳ್ದಾ. ಆದರ ನಾಕ ವರಸ ಸಮಪಾಲು ಕೊಡಬೇಕಂತ.

ಪು:- ನೀ ಏನಂದಿ?

ಎ:- ನಾ ಏನಂತೀನೆಪ್ಪ. ನೀನ ಏಳಿದ್ದೆಂತ ನಾನು ಊಂ ಅಂದೆ. ಪೂರಾ ಒಲಾನ ಓಗತಿತ್ತು. ನಾಕ ವರಸ ಯಾಕ ಇನ್ನೊಂದರಸಾದರೊ ಸಮಪಾಲು ಕೊಡತೀನಿ ಅಂತ ಏಳ್ದೆ.

ಕೇ:- ಅಬಬಾ! ಸೆಟ್ಟಿ ನಿನ್ನ ಹೊಲಾ ಖರೀದಿ ಆಗಿ ಹೋದದ್ದನ್ನ ತಿರುಗಿ ಕೊಡಲಿಕ್ಕೆ ತಯಾರಾದನ?

ಎ:- ಸಣ್ಣ ದಣೇ ಪುಣ್ಣೇವಪ್ಪ.

ಕೇ:- ನೆಟ್ಟಗಾತು ನಡಿ. ಮತ್ತ ನಮ್ಮ ಹೊಲಾ ಇನ್ನ ಎರಡನೇವರಿಗೆ ಕೊಡಲಿಕ್ಕೇನು ಅಡ್ಡಿ ಇಲ್ಲ. ನಿನಗಂತು ಹೊಲಾ ಸಿಗತದಲ್ಲ.

ಎ:- ಸಲವ್ರೋರು ನೀವು, ನೀವ್ ಎಂಗ ಅಂದ್ರಿ ಅಂಗ. ನಾನು ಬಡವ ಮಕ್ಕಳಂದಿಗ. ಒಂದೋಲಾ ಎಡ್ತ ಕೂರಗೀದು. ಎದಕಾಗತ್ತೈತೆಪ್ಪ.

ಕೇ:- ಅಂದರ ನೀವು ಲಪುಟಗಿರಿ ಬಿಡಬೇಕ ನೋಡು. ಹೊಲಾ ಹಸನ ಇಡಬೇಕು. ಹಿಂದಿನ ಬಾಕಿ ಲಗೂನ ತೀರಿಸಬೇಕು. ಅಂದರ ನೋಡು ಮತ್ತ.

ಎ:- ನಿನಗೆ ನಾನೆಲ್ಲ ಒರ್ತ ಆದೀನಿ ಎಪ್ಪಾ (ಎಂದು ಕೇಶವರಾಯರ ಕಾಲಿಗೆ ಎರಗುವನು)

ಕೇ:- ನಿಮ್ಮ ಸಣ್ಣ ದಣಿ ಮನಸಿನ್ಯಾಗ ನಿನಗೆ ಕೊಡಬೇಕಂತ ಅದ; ಆಗಲಿ ನೀನೇ ಮಾಡಿಕೊ.

ಎ:- [ಪುರುಷೋತ್ತಮರಾಯರ ಕಾಲ ಮೇಲೆಬಿದ್ದು] ದೇವರ ಇದ್ದಾಂಗ ಅದೀದೆಪ್ಪ. ನಾವು ಬಡ ಸೂಳೇ ಮಕ್ಕಳು ಭೂಮಿತಾಯಿ ಪದರಿಗೆ ಬಿದ್ದೋರು.

ಪು:- ಆ ನಿನ್ನ ಭೂಮಿತಾಯೀನೇ ಇಷ್ಟೆಲ್ಲ ಕರಾಮತ್ ಮಾಡ ತಾಳಪ್ಪ. ಆಕಿ ದಯದಿಂದ ನಿನಗ ಇವೆಲ್ಲ ಸಿಕ್ಕಿದ್ದು.

ಎ:- ಎಲ್ಲಾ ಭೂಮಿತಾಯಿ ಕಣ್ಣ ತಗದರ ಈ ಕೆಟ್ಟ ಕಾಲಾನ ಓಗಿ ಬಿಡತಾವ. ಎಲ್ಲರೂ ಸುಕದಿಂದ ಇರತಾರೆಪ್ಪ

ಕೇ:- ಹೌದಪ್ಪ ಎಲ್ಲರಿಗೂ ಸುಖ ಆಗೋದೇ ಆಗಲಿ.

ಪು:- ಹೌದು "ಸರ್ವೋಜನಾಃ ಸುಖಿನೋ ಭವಂತು" ಎಂಬುದೆ ನಮ್ಮ ಪುರಾತನ ಸಂಸ್ಕೃತಿ.

(ಇದು ಈ ಹಿಂದೆ ಹೈದರಾಬಾದ್ ಆಕಾಶವಾಣಿಯಿಂದ ಪ್ರಸಾರಗೊಂಡಿದೆ.)

# ಕಿಡಿಗೇಡಿತನ

—: ಪಾತ್ರಗಳು :—

- ಅನಂತರಾಯ:- ಸರಕಾರಿ ನೌಕರ, ಸದ್ಗೃಹಸ್ಥ.
- ಕಮಲಾಬಾಯಿ:- ಹೆಂಡತಿ.
- ಸೀತಾ:- ಹಿರಿಯಮಗಳು, ವಯಸ್ಸು ೧೦.
- ಕೃಷ್ಣ:- ಸೀತೆಯ ತಮ್ಮ, ವಯಸ್ಸು ೮ ವರ್ಷ.

**[ ಸಂಜೆ ೬ ರ ಸಮಯ. ಮಳೆಗಾಲ. ಮನೆಯ ಹೊರಗಿನ ಕೋಣೆ. ೨೦ ನೆಯ ಶತಮಾನದ ಸುಶಿಕ್ಷಿತರ ಮನೆಯಲ್ಲಿರುವ ಸಾಮಾನುಗಳು ಕೋಣೆಯಲ್ಲಿ ಓರಣಿಸಲು ನಿಂತಿವೆ. ಕೃಷ್ಣನು ಪುಸ್ತಕಗಳನ್ನು ಇಟ್ಟುಕೊಂಡು ಕುಳಿತಿದ್ದಾನೆ. ಮನೆಯ ಒಳಗೆ ಮೇಲಿಂದ ಮೇಲೆ ನೋಡುತ್ತಿದ್ದಾನೆ. ಒಮ್ಮೆಲೆ ಸಹನೆ ಮೀರಿದವನಂತೆ ]**

ಕೃಷ್ಣ: ಸೀತಾ ಏ ಸೀತಾ, ಲಗೂ ತಾರಽಽ ದೀಪಾನ.

ಸೀತಾ:- (ದೀಪದೊಡನೆ ಪ್ರವೇಶಿಸಿ) ಒಂಚೂರು ತಡೋ ತನಕ ಪುರುಸೊತ್ತು ಇಲ್ಲ ನೋಡು. ಎಷ್ಟು ಜೋರು ಮಾಡತಾನ.

ಕೃಷ್ಣ:- ಹೌದ ಮತ್ತ. ಕತ್ತಲದಾಗ ಎಷ್ಟೊತ್ತು ಕೂಡಬೇಕು? ಇಷ್ಟ ತಿಳೀಬಾರದೇನ ನಿನಗ! ಓದುಬೇಕಾಗೇದ. ಬರೀಬೇಕಾಗೇದ.

ಸೀ:- ಅಷ್ಟು ಅವಸರ ಇದ್ದಾಂವಾ ನೀನೇ ಹಚ್ಚಿಕೋಬೇಕು ದೀಪಾನ. ನನ್ನ ಮ್ಯಾಲ ಜೋರ ಮಾಡಲಿಕ್ಕೆ ನಿನ್ನ ಚಾಕರಿ ಆಳೇನು?

ಕೃ:- ಹೂಂ. ಕಸಾಬಳಿಯೋದು, ಎಂಜಲಾ ಬಳಿಯೋದು, ದೀಪಾ ಹಚ್ಚೋದು ನಾನು ಮಾಡಲೇನು?

ಸೀ:- ಏನ ನನಗೇ ಗುತ್ತಿಗಿ ಕೊಟ್ಟದೇನು? ಮಾಡೋತನಕ ತಡೀ ಬೇಕು. ಇಲ್ದೆ ಇದ್ರ ನೀನೇ ಮಾಡಿಕೋಬೇಕು.

ಕೃ:- ಊಂ. ಇರವಲ್ದ್ಯಾಕ. ಈಗನಕಾ ದೀಪಾ ಹಚ್ಚೇದೆಲ್ಲಾ! ಈಗ ಯಾಕ ಆ ಮಾತು? ಅಲ್ಲೇ, ನೀನು ನಂದು ಫೌಂಟನ್‌ಪೆನ್ ತಗೊಂಡೀ ಯಲ್ಲ? ನೀನು ಅದನ್ನ ತಗೊಂಡು ಹೋದರ ನಾಯೇನ ಮಾಡಬೇಕು ಸಾಲ್ಯಾಗ?

ಸೀ:- ನಿಂದೇನ ಅದು ಫೌಂಟನ್‌ಪೆನ್ನು ?

ಕೃ:- ಮತ್ತ ಯಾರದು ಹಂಗಾರ?

ಸೀ:- ಯಾರದು? ನೀನೇ ಹೇಳು.

ಕೃ:- ನನ್ನ ಕೋಟಿನ ಜೇಬಿನೊಳಗಿಂದ ತಗೊಂಡು ಮತ್ತ ನನ್ನs ಯಾರದೂ ಅಂತ ಕೇಳತೀದೇನು? ಯಾರದು ಅನ್ನೋದು ಗೊತ್ತಿಲ್ಲ ನಿನಗ?

ಸೀ:- ಯಾರದು ಅನ್ನೋದು ನನಗೆ ಗೊತ್ತಿಲ್ಲ. ನಿನ್ನ ಜೇಬಿನೊಳ ಗಿಂದ ನಾನು ತಗೊಂಡಿಲ್ಲ.

ಕೃ:- ಯಾರದಂತ ತಿಳಿದು ತಗೊಂಡೀದಿ ಅದನ್ನ ?

ಸೀ:- ಅದನ್ನ ಕೇಳಲಿಕ್ಕೆ ನೀ ಯಾರು?

ಕೃ:- ಅದನ್ನು ಕೇಳಲಿಕ್ಕೆ ನೀಯಾರು! ನನ್ನ ಪೆನ್ನು ತಗೊಂಡೀದಿ. ಕೇಳಿದರ ನೀ ಯಾರು ಅಂತ ನನಗ ಕೇಳತೀದೇನು? ಅಲ್ಲ, ಕಡೀಕೆ ನೀನು ಅದನ್ನ ಯಾರದು ಅಂತ ತಿಳಿದು ತಗೋಂಡೀದಿ ?

ಸೀ:- ಅದನ್ನ ತಗೊಂಡು ನೀ ಏನ ಮಾಡತೀದಿ? ನಿಂದನಕಾ ಅಲ್ಲ ಹೌದಲ್ಲೋ ?

ಕೃ:- ಹಾಂ! ನನ್ನದಲ್ಲಂತ ಯಾರ ಹೇಳಿದರು?

ಸೀ:- ಎಲ್ಲಾ ಗೊತ್ತದ. ನನಗ ಕಲಿಸ್ತೀರೇನ್ರಿ ಅಪ್ಪನೋರ.

ಕೃ:- ಯಾಕs ! ನನ್ನ ಜೇಬಿನೊಳಗಿಂದ ಕಳವು ಮಾಡಿಕೊಂಡು, ನನ್ನದಲ್ಲಂತ.

ಸೀ:- ನಿನ್ನ ಜೇಬಿನೊಳಗಿಂದ ಅಪ್ಪ ತಗೊಂಡಿದ್ದ. ನಾನಲ್ಲ.

ಕೃ:- ಅಪ್ಪನ ಜೇಬಿನೊಳಗಿಂದ ನೀನು ಎಬ್ಬಿಸಿದೇನೋ ?

ಸೀ:- ದಿನಾ ನೀನು ಹೊರತೀಯಲ್ಲ. ಇಷ್ಟ್ಯೋತನಕ, ಏನ ಹಂಗ ತನ್ನದೇ ಅನ್ನೋರ ಹಾಂಗ ಮಾತಾಡದ್ಯಾ.

ಕೃ:- ಅಪ್ಪಾ ನನಗ ತಗೋ ಅಂತ ಹೇಳ್ಯಾನ. ಅದಕ ತಗೋತೀನಿ. ನನ್ನ ದಶಿಂದ ಅಂತ ತಂದಾನ.

ಸೀ:- ಊಂ. ನಿನ್ನ ದಶಿಂದಂತ ತಂದಾನೇನೋ? ಲೊಟ್ಟಪ್ಪನ ದಶಿಂದ.

ಕೃ:- ಅವತ್ತ ಬಾಜಾರಕ್ಕ ನಾನು ಅಪ್ಪಾ ಇಬ್ಬರು ಕೂಡೇ ಹೋಗಿ ತಗೊಂಡು ಬಂದೀವಿ. ಗೊತ್ತದನs. ಅಪ್ಪಗ ನಾನು ಕೇಳಿದೆ. ನನಗ ಕೊಡ ತೀಯೇನಪ್ಪ ಅಂತ. ಮತ್ತಿದ್ದರ ಹೂಂ ಅಂದಾನ. ಸುಳ್ಳ ಸುಳ್ಳೇ ಏನಾ ರ ಅಂತೀದಿ ಅತ್ಯು.

ಸೀ:- (ಮೂಗು ಮುರಿದು) ಊಂ. ಎತ್ತಲಾಗ ಬರೀತಾನೋ ಫೌಂಟನ್ ಪೆನ್ನಿನಿಂದ! ತನಗ ತಗೋ ಅಂತ ಹೇಳಿದನಂತ!

ಕೃ:- ಅಲ್ಲೇನ ಮತ್ತೆ ! ಈಗ ಅಪ್ಪ ಬರಲಿ ಕೇಳಿಸಿಕೊಡತೀನಿ.

ಸೀ:- ಯಾರದೂ ಅಲ್ಲ ಅದು. ಅಪ್ಪಂದು ತಿಳೀತೇ.

ಕೃ:- ಅಪ್ಪಂದಂದ್ರ ನಂದ ಆಗಲಿಲ್ಲೇನು?

ಸೀ:- ನಿಂದ ಹೆಂಗ ಆಗತದ?

ಕೃ:- ನಂದ ಹೆಂಗ ಆಗತದ ! ಮಾಸ್ತರು ಹೇಳ್ಯಾರ ಮಾಸ್ತರು. ತಂದೀ ಸಾಮಾನೆಲ್ಲ ಗಂಡಸಮಕ್ಕಳವೂ' ಅಂತ. ಹೆಂಗಸರಿಗೆ ಇಲ್ಲ ಅಂತ. ತಿಳೀತ? ನನ್ನದೇ ಅದು ಸುಮ್ಮನೆ ತಾ.

ಸೀ:- ಆಹಾ. ಏನ ಶಾಣ್ಯಾ ಆಗಿಯೋ! ಹೆಂಗಸರೇನು ಪರದೇಶಿಏನು?

ಕೃ:- ಗಂಡನ ಮನಿ, ಗಂಡನ ಮನಿ.

ಸೀ:- (ಸಿಟ್ಟಿನ ಅಳುಮೋರೆಯಿಂದ) ಚೋಟ ಇದ್ದೀದಿ. ನಿನಗ್ಯಾಕೋ ಇಷ್ಟು ಮಾತು ?

ಕೃ:- ಆಹಾ ಅಳೋ ಮೋತಿ ಮಾಡತಾಳ. ಹೌದು. ಹೌದು. ನನಗೆಲ್ಲ ಗೊತ್ತದ. ಸುಮ್ಮನೆ ನನ್ನ ಪೆನ್ನ ಕೊಡು.

ಸೀ:- ಅಪ್ಪ ಬಂದಮ್ಯಾಲೆ ಕೊಡತೀನಿ.

ಕೃ:- ಅಪ್ಪ ಬರೋತನಕಾ ನಾನು ಹೀಂಗ ಕೂಡಲೀನು? ನಾನು ಬರಿಬೇಕಾಗೇದ.

ಸೀ:- ಏನು ಬರೀತೀದಿ. ನಾನೂ ಬರೀಬೇಕಾಗೇದ.

ಕೃ:- ನಾನು ಲೆಖ್ಖ ಮಾಡಬೇಕಾಗೇದ. ಕನ್ನಡ ನಿಬಂಧ ಬರೀಬೇಕಾಗೇದ. ನೀ ಏನ ಮಾಡತೀದಿ.

ಸೀ:- ನನಗ ಹಾಡು ಬರೀಬೇಕಾಗೇದ. ನೀನು ಅವತ್ತ ಹಾಡಿದ್ದೆಲ್ಲ ಅದನ್ನ. ನೀನು ಹೇಳು. ನಾನು ಬರಕೋತೀನಿ. ಅಷ್ಟು ಹೊತ್ತಿಗೆ ಅಪ್ಪ ಬರತಾನ. ಆತನ್ನ ಕೇಳಿ ನಿನಗ ಪೆನ್ನ ಕೊಡತೀನಿ.

ಕೃ:- ನಾನೇ ಆ ಹಾಡು ಬರದು ಕೊಡತೀನಿ. ತಾ ಪೆನ್ನ.

ಸೀ:- ನೀ ಹೇಳೋ. ನಾ ಬರಕೋತೀನಿ.

ಕೃ:- ಪೆನ್ನ ಕೊಡು. ನಾನೆಲ್ಲ ಬರದುಕೊಡತೀನಿ.

ಸೀ:- ನಿನ್ನ ಅಕ್ಷರ ನೆಟ್ಟಗಾಗೂದುಲ್ಲ.

ಕೃ:- ನಿನ್ನ ಅಕ್ಷರೇನು ದುಂಡ ಆಗತಾವಂತ ಮಂದಿಗೆ ಹೇಳತೀದಿ!

ಸೀ:- ಫೌಂಟನ್ ಪೆನ್ ಸಹಿತ ಹಿಡಿಲಿಕ್ಕೆ ಬರೋದಿಲ್ಲ. ಅದಿಷ್ಟು ಕೆಡಸಬೇಕಂತೀಯೇನೋ?

ಕೃ:- (ಅಕ್ಕಸದಿಂದ) ನಿನಗ ಬರೀಲಿಕ್ಕೆ ಬರತದ ಆತ್ಯೆ? ನೀನೇ ಶಾಣ್ಯಾಕಿ ಆಗಿ, ಎಲ್ಲಾ ಪಾಸಾಗಿ ನೌಕರಿ ಮಾಡುವಂತಿ. ಆತಿಲ್ಲೊ! ಈಗೊಂದು ಒಳ್ಳೆ ಮಾತಿಲೆ ನನ್ನ ಪೆನ್ ಕೊಡು. ಇಲ್ಲದೆ ಇದ್ದರ ನೋಡು.

ಸೀ:- ಇಲ್ಲದಿದ್ದರ ಏನು ಮಾಡತೀದಿ?

ಕೃ:- ಏನ ಮಾಡತೀನೋ ನೋಡೋವಂತಿ. ನಿನ್ನ ಎಲ್ಲಾ ಪುಸ್ತಗಾ ತಂದು ಹೊರಗ ಅಂಗಳದಾಗ ಒಗಿತೀನಿ. ಪಾಟಿ ಎಲ್ಲಾ ಹರದು ಒಗಿತೀನಿ. ಆ ನಿನ್ನ ಕಸೂತೀಗೆ ಬೆಂಕಿ ಹಚ್ಚಿತೀನಿ.

ಸೀ:- ಇತ್ತಲಾಗಿನವರು ಬಿಡತಾರಂತ ಮಾಡೀದೇನೊ? ಚೋಟ ಇದ್ದಾನ ಎಷ್ಟು ಮಾತಾಡತಾನ!

ಕೃ:- ಮತ್ತ ನನ್ನ ಪೆನ್ ಯಾಕ ಕೊಡಬಾರದು ?

ಸೀ:- ಹೇಳಲಿಲ್ಲೇನೋ ಆಗಲೆ?

ಕೃ:- ಏನ ಹೇಳಿದಿ ?

ಸೀ:- ತಿರಗಿ ಮುರಗಿ ಏನ ಹೇಳತಾರ?

ಕೃ:- (ಜೋರಾಗಿ) ನನಗ ಗೊತ್ತಿಲ್ಲೇ! ಹೇಳು.

ಸೀ:- ಏನು ಹೇಳತಾರ. ನಿನ್ನ ತಲಿ.

ಕೃ:- (ಕೆರಳಿ) ಯಾಕ ಒಳ್ಳೇ ಮ್ಹಾತಿಲೆ ಕೊಡು ಅಂದರ (ಎಂದು ಅವಳೊಡನೆ ಗುದುಮುರಿಗೆ ಬಿದ್ದು ಪೆನ್ ಕಸಿದುಕೊಳ್ಳಲು ಹೋಗುವನು. ಅವಳು ಕೈಗೆ ಸಿಗದಿರಲು ಹೆರಳ ಹಿಡಿದು ಜಗ್ಗುವನು-)

ಸೀ:- (ಚೀರುತ್ತ) ಅವ್ವಾ, ಕೊಲ್ಲತಾನವ್ವಾ ಇಂವಾ, ಹೆರಳು ಹಿಡಿದು ಜಗ್ಗತಾನ. ಎಲೋ ದುಷ್ಟಾ. ಅಯ್ಯೋ, ಅಯ್ಯಯ್ಯೋ!

ಕಮಲಾಬಾಯಿ:- (ಪ್ರವೇಶಿಸಿ) ಏನೋ ಅದು. ಬಿಡು ಹೆರಳು.

ಕೃ:- (ಹೆರಳು ಬಿಟ್ಟು ದೂರ ಸರಿದು ನಿಂತು)ನೋಡು ಮತ್ತೆ ನಂದು ಇದು ಕೊಡುವಳ್ಳು

ಕ:- ಏನು ತಗೊಂಡಿಯವ್ವ ಆ ದುಷ್ಟಂದು. ಕೊಟ್ಟುಬಿಡಬಾರದ.

ಕೃ:- (ಗೆಲುವಿನಿಂದ)ಊಂ. ಕೊಡು ಈಗ ಸುಮ್ಮನೆ.

ಸೀ:- ಇಲ್ಲವ್ವಾ, ಪೆನ್ ಕೊಡು ಅಂತಾನ. ನಾನು ಬರಿಬೇಕಾಗೇದ.

ಕ:- ನೀ ಏನು ಮಾಡತೀಯೋ ಅದನ್ನ ತಗೊಂಡು? ಸೀತಾ ನೀನು ಶಕುಂತಳಾನ ಮನೀಗೆ ಹೋಗಿ ಬರಕೋತ ಕೂಡು ಹೋಗು. ಇವನ ಕಿಡಿಗೇಡಿತನ ಕಾಡುಸೋದು ನೋಡಲಾರೆ.. (ಸೀತಾ ಹೋಗುವಳು)

ಕೃ:- ಬಿಡತೀನೇನೋ. ನಾನು ಕಸಗೊಂಡು ಬರತೀನಿ. ( ಅವಳ ಹಿಂದೆ ಹೋಗಲು ಪ್ರಯತ್ನಿಸುವನು.)

ಕ:- (ಅವನನ್ನು ತಡೆದು) ಯಾಕೋ ಉನ್ಮತ್ತಾ. ಅವಳ ಸಂಗಡ ಯಾಕೋ ಗುದುಮುರುಗಿ? ನಾನು ಏನಂತಾನೋ ಅಂತ ಮಾಡೀನಿ. ಸುಮ್ಮನೆ ಕೂತು ಓದಬಾರದೇನೊ ! ಆಕಿನ್ನ ಯಾಕ ಗೋಳಾಡಸತೀದಿ?

ಕೃ:- ನನ್ನ ಪೆನ್ ಯಾಕ ತಗೋಬೇಕು ಮತ್ತ?

ಕ:- ನಿನ್ನದಂತಯಾರು ಹೇಳಿದರು? ಅವಳದಶಿಂದಂತ ತಂದಾರಅದನ್ನ

ಕೃ:- (ವ್ಯಂಗವಾಗಿ)ಊಂ. ಆಕಿ ದಶಿಂದ ತಂದಾರ ಅದನ್ನ

ಕ:- ಯಾರ ದಸಿಂದೂ ತಂದಿಲ್ಲಪಾ. ಅವರದೇ ಅದು. ಬರೀಲಿಕ್ಕೆ ಅಂತ ಕೊಟ್ಟಾರ ಆಕಿಗೆ. ಆತ ಯಾಕ ಜಗಳ.

ಕೃ:- ಅಪ್ಪ ಕೊಟ್ಟಿಲ್ಲ. ತಾನೇ ಜೇಬಿನೊಳಗಿಂದ ಎಬ್ಬಿಸ್ಯಾಳ.

ಕ:- ನಾನೇ ಆಕಿಗೆ ತಗೋ ಅಂತ ಹೇಳಿದ್ದೆ.

ಕೃ:- ಅಪ್ಪಾ, ನಂದೂ ಅಂತ ಹೇಳ್ಯಾನ.

ಕ:- ನೀನು ಅಳತೀದಿ ಅಂತ ಹಾಂಗ ಹೇಳ್ಯಾರ.

ಅನಂತರಾಯ:- (ಪ್ರವೇಶಿಸಿ) ಏನ ಅದು ಗದ್ದಲ.

( ಕೃಷ್ಣ ಹೊರಗೆ ಓಡಿ ಹೋಗುವನು. ಅನಂತರಾಯರು ಪಲ್ಯಕಾಯಿಯನ್ನು ಕಮಲಾಬಾಯಿಯ ಎದುರಿಗೆ ಸುರುವನು) ಯಾಕ ಅಂವಾ ಓಡಿದನಲ್ಲ. ಅವನ್ನ ರೇಗಿಸಿದೇನು? ರೇಗಿಸಬ್ಯಾಡ ಅವನ್ನ.

ಕ:- ಅವನ ಕಿಡಿಗೇಡಿತನ ನೋಡಿದರ ತಿಳದೀತು. ಸೀತಾನ್ನ ಅಳಿಸಿ ಕಣ್ಣೀರು ಕಪಾಳಕ್ಕ ಇಳಸತಾನ. ಈ ಗಂಡು ಜಾತೀನೇ ಹೀಂಗೋ ಏನೊ.

ಅ:- ಆಂ! ಗಂಡಜಾತೀಮ್ಯಾಲೆ ಪ್ರಹಾರ ಮಾಡಿದೆಲ್ಲ. ಒಳ್ಳೇದು. ಗಂಡು ಕಿಡಿಗೇಡಿ ಹೌದಲ್ಲೊ. ಆಗಲಿ.(ಪಲ್ಯ ಆಕೆಯಮುಂದೆಸುರುವುವನು.)

ಕ:- ಹೋಗಲಿ ಬಿಡಿರಿ. ಅಯ್ಯ, ಮತ್ತೆ ಸುಡುಗಾಡು ಈ ಎಲೀ ಪಲ್ಯಾನೇ ತಂದರ್‍ಯಾ ? ಇದನ್ನ ಬ್ಯಾಡಾ ಅಂದಿದ್ದೆ. ನಿಮ್ಮದೇ ಸಾಥ ಸತೀರಿ.

ಅ: ನಿಮ್ಮದೇ ಸಾಥಸತೀರಿ ಅಂದರ ಎಲೀ ಪಲ್ಯ ಸೋಯಿ ಇರತದ ಮತ್ತ ಬ್ಯಾಳಿ ಹಾಕಿ ಮಾಡಿದರ ಎಷ್ಟು ರುಚಿ ಆಗತದ?

ಕ: ಅದಕ ಬ್ಯಾಳಿ ಎಷ್ಟು ಖರ್ಚಾಗತದ ಗೊತ್ತದ?

ಅ: ಆ! ಅದೆಷ್ಟು ಖರ್ಚಾಯಿತು.

ಕ: ಹೌದರಿ. ನಿಮ್ಮ ಮಾತಂದರ ಹೀಂಗ. ನೀವು ಗಂಡಸರು. ನಿಮ್ಮ ಮಾತೇ ಮೇಲು. ಆದರಾತು. ಹೋಗಲಿ ನಾನು ಹೇಳಿದ್ದು ತಗೊಂಡು ಬಂದರ್‍ಯಾ ?

ಅ: ಆಂ. ಆಂ. ಅದೂ, ಅದು ಒಳ್ಳೇದು ಚಹಾ ಆಗೇದ?

ಕ: ಇಲ್ಲೇ ಇಟುಗೊಂಡು ಕೂತೀನಿ ಥರಮುಸ್ಸಿನಾಗ ತಗೊಳ್ಳಿರಿ. (ಚಹಾ ಹಾಕಿ ಕೊಡುವಳು)

ಅ:- (ಚಹ ಕುಡಿಯುತ್ತ) ಚಹಾ ಇವತ್ತ ಬಹಳ ರುಚಿ ಆಗೇದ.

ಕ:- ಹೌದು ನೀವು ಸುಮ್ಮನೇ ಸ್ತುತಿ ಮಾಡಿ ನನ್ನ ಮಾತು ಮರಸ ಬ್ಯಾಡಿರಿ.

ಅ:- ಏನು ಮಾತು? ಮರಸೋದೇನು ?

ಕ:- ಅಯ್ಯ ಹೋಗರಿ ಅಂದರ. ನಿಮ್ಮ ಮನಸ್ಸಿಗೆ ಬಂದ ಹಾಂಗ ಮಾಡಿರಿ. (ಅಳುದನಿಯಲ್ಲಿ ) ನಮ್ಮದು ಯಾವುದೇನು ನಡೀತದ. ಮನ್ಯಾಗ ಅಡಿಗಿ ಮುಸರಿ ಚಾಕರಿ ಅಷ್ಟು ನಮ್ಮ ಹಣೇಬರದಾಗ ಬರದಾಗ ಅದ. (ಹೋಗಲು ಏಳುವಳು)

ಅ:- ಆಹಾ, ಗಂಗಾ ಭಾಗೀರಥಿ ಪ್ರಸನ್ನ ಆದಳ? ಚಹಾ ಕುಡೀಲೋ ಬ್ಯಾಡೊ?

ಕ:- (ಸಮಾಧಾನದಿಂದ) ಕುಡೀರಿ. ಕುಡೀರಿ.(ಕಣ್ಣೀರೊರಸಿಕೊಂಡು) ನಾನು ಇನ್ನ ಮ್ಯಾಲೆ ನಿಮಗೆ ಯಾವುದು ತಾ ಅಂತ ಹೇಳೋದೆ ಇಲ್ಲ.

ಅ:- ನೀನು ಹೇಳಲಾರದೇನೇ ತಂದು ಕೊಡತೀರೋ ಮುಂಧ, ಆ ಪ್ರಸಂಗನರೆ ಯಾಕ ಬರತದ?

ಕ:- ನಿಮಗ ಯಾವದ ಒಂದೂ ಚ್ಯಾಷ್ಟೀನೇ ಆಗತದ.

ಅ:- ಕೂಡ್ರ, ಕೂಡು ಒಂದಿಷ್ಟು. ಇದೇ ಈಗ ಹೊರಗಿನಿಂದ ಬಂದೀನಿ ಆಯಾಸ ಆಗೇದ.

ಕ:- ಹೌದು. ವಿಶ್ರಾಂತಿ ತಗೋಳ್ರಿ. ನಾನು ಹೋಗತೀನಿ. ಇನ್ನೂ ಪಲ್ಯ ಮಾಡೋದದ.

ಅ:- ನೀನು ಒಳಗ ಹೋದರ ವಿಶ್ರಾಂತಿ ಹ್ಯಾಂಗ ಆಗತದ. ನಾನ್ ತಂದ ಸಾಮಾನು ಯಾರ ನೋಡಬೇಕು?

ಕ:- ಅಯ್ಯ,ಹಾಂಗಾರ ತಂದೀರೆನಂದರ ನನ್ನ ಹರಳಿನ ಬೆಂಡೋಲಿ. ತೋರಸರಿ. ಎಲ್ಲೆವ? ಆ ನಿಮ್ಮ ತೊಗಲಿನ ಚೀಲದಾಗ ಇದ್ದೀತೇನು ಏನು ಕೋಟಿನೊಳಗ ಅವನಿ ? ತರ್ರಿ. ಅದನ್ನು ನೋಡತೀನಿ.

ಅ:- ಹಾಂ. ಹಾಂ. ಸ್ವಲ್ಪ ತಡಿ. ಗಡಬಿಡಿ ಮಾಡಬಾರದು.

ಕ:- ತೋರಿಸಿರೆಂದರ.

ಅ:- ಇದೇ ನೋಡು ನನಗ ಸರಿ ಬರೋದಿಲ್ಲ,ಒಳ್ಳೇದು. ನೀ ಹೇಳಿದ ಸಾಮಾನಿ ತಂದೀನೆಂಬೋದು ಎದರ ಮ್ಯಾಲಿಂದ?

ಕ:- ಅದಕ್ಕೆ ತಂದದ್ದು ತೋರಸಿರಿ ಅಂಬೋದು.

ಅ:- ಅದಕ್ಕೇ ನೀನಿಲ್ಲಿ ಕೂಡು ಅನ್ನೋದು. ಅಲ್ಲ. ನೀನು ನಿನಗ ಬೇಕಾದದ್ದನ್ನೆಲ್ಲ ನನ್ನಿಂದ ತರಿಸಿಗೋತೀದಿ. ನಾನು ಹೇಳಿದ್ದು ಒಂದಾದರೂ ಮಾಡತೀದ್ಯಾ?

ಕ:- ಅಯ್ಯ, ನೀವು ಕಾಲಕೆದರಿ ಜಗಳ ತಗೀಬೇಕಂತೀರೇನು? ನೀವು ಹೇಳಿದ್ದು ಮಾಡೋದಿಲ್ಲಾ ಅಂತ ಅಂದರ ಯಾರಾದರೂ ಖರೇ ಅಂತ ತಿಳ ಕೊಂಡಾರು.

ಅ:- ನಿನಗಿನ್ನೂ ಅನುಮಾನ ಅದ ಏನು? ಖರೇ ಅಂತನs ಖರೇ ತಿಳ ಕೊಂಡಾರ. ನನಗ ದೇವಿಪ್ರಿಯ ಅಂತ ಟೈಟಲ್ ಬಂದೇ ಬಿಟ್ಟದ್ವಲ್ಲ.

ಕ:- ಅಯ್ಯ, ಸಾಕು ಬಿಡರಿ. ಮತ್ತ ಮನ್ಯಾಗಿನ ಹೆಂಡತಿ ಮಾತು ಕೇಳದಿದ್ದರ ಇನ್ನೇನು ಪರ ಹೆಂಗಸರ ಮಾತು ಕೇಳಬೇಕ?

ಅ:- ನಾನು ಅದೇ ಅಂತೀನಿ. ನಾವೆಲ್ಲ ಗಂಡಸರು ಅಂತ ಅನಿಸಿಕೊ ಳ್ಳೋದು ಮನೆ ಹೆಂಡತಿಗೆ ಸದಾ ದಾಸಾನು ದಾಸರು. ಹಾಂಗ ಅಂದರ ನಿಮಗ ಸಿಟ್ಟುಬರತದ.

ಕ:- ನಿಮ್ಮ ಸಂಗಡ ಮಾತಾಡಿ ಯಾರ ಗೆದ್ದಾರರಿ! ನೀವು ಗಂಡಸರು. ಎಷ್ಟಂದರೂ ಸ್ವತಂತ್ರರು. ನಿಮ್ಮದೇ ಮೇಲುಗೈ.

ಅ:- ಅಕಾ ನೋಡದ್ಯಾ. ಹುತ್ತೆ ಅದೇ. ಹಾಂಗ ಮೇಲಗೈ ಆಗಿ ದ್ದರ ನಮಗಬೇಕಾದ್ದನ್ನ ನಿಮ್ಮ ಕಡಿಂದ ಮಾಡಿಸಿಕೊಳ್ಳೋ ಶಕ್ತಿನಮ್ಮಲ್ಲಿ ಯಾಕಿರತಿದ್ದಿಲ್ಲ.

ಕ:- ನೀವು ಸಮ್ಮನೆ ಮಾತು ಬೆಳಸಬ್ಯಾಡಿರಿ. ತೋರಿಸತಿದ್ದರ ತೋರ ಸಿರಿ. ಇಲ್ಲ, ನಾನು ಹೋಗತೀನಿ.

ಅ:- ಮತ್ತು ನಾನು ಆಗಲೇ ಅಂದದ್ದೇನು? ನೀನು ನನ್ನ ಮಾತು ಕೇಳೋದೇ ಇಲ್ಲ.

ಕ:- ಘಳಿಗ್ಗೊಮ್ಮೆ ಯಾಕ ಹಂಗ ಅಂತೀರಿ? ಯಾವ ಮಾತು ಮೀರೀನಿ ನಾನು?

ಅ:- ಈಗ ಸದ್ಯಾನ ನೋಡಲ್ಲ. ನಾನು ಕೂಡು ಅಂದರೆ ನೀನು ಹೋ ಗತೀನಿ ಅಂತೀದಿ.

ಕ:- ಇಕಾ ಕೂತೀನಿ. ನೋಡಿರಿ.

ಅ:- ಆದರ ಮಾರಿ ಮ್ಯಾಲ ಗಂಟುಯಾಕೆ ?

ಕ:- (ಮುಗುಳು ನಗೆ ನಕ್ಕು) ಬಲು ಕಠಿನಾ ಅದ ಅಂದರೆ ನಿಮ್ಮ ಸಂಗಡ.

ಅ:- ಹಾಂ ! ಅಂದರೆ ಏನ ಅಂಧ್ಹಂಗಾತಲ್ಲ. ನೀನು ನನ್ನ ಮಾತು ಮೀರೋದಿಲ್ಲ. ಹೌದಲ್ಲೊ ?

ಕ:- ಏನು ಕಾಗದ ಬರದುಕೊಡಲಾ ?

ಅ:- ಬರಿಸಿಕೊಂಡರೂ ಅಡ್ಡಿ ಇಲ್ಲ ಬಿಡು.

ಕ:- ಅಯ್ಯ ಹೌದರಿ. ಹಾಂಗ ಇನ್ನೊಬ್ಬರ ಹಾಂಗ ಆಗಿದ್ದರೆ ಇನ್ನ ಏನ ಮಾಡತಿದ್ದರೋ ಏನೋ. ಆ ನಿಮ್ಮ ಗೆಳೆಯ ಇದ್ದಾನಲ್ಲ. ಆತನ ಹೆಸರ ಏನು ? ಪದ್ಮನಾಭರಾಯ. ಆತನ ಹೆಂಡತಿ ಹಾಂಗ ಹೋಟೇಲ್ಲ ನಿಂದ ಡಬ್ಬಿ ತರಿಸಿದರ ನೆಟ್ಟಗಿರತಿತ್ತು.

ಅ:- ಸುರಕ್ಷಿತಾರ ಆಗತಿತ್ತು. ನಿನ್ನ ಕೈಲೆ ನಿತ್ಯ ಅನಿಸಿಕೊಳ್ಳೋದಾರ ತಪ್ಪತಿತ್ತು. ಈ ಬಾಜಾರದಿಂದ ಸಾಮಾನು ತರೋ ತಗಾದಿ ಇರತಿದ್ದಿಲ್ಲ.

ಕ:- ಒಳ್ಳೇ ಉಂಡೀರಿ ಹೋಟಲ್ಲ ಊಟಾ. ಹಡದಾಗ ಮೂರು ತಿಂಗಳು ಹೋಟಲ್ಲನ್ಯಾಗ ಉಂಡು ಜಡ್ಡಾಗಿ ಮಲಗಿದರಿ. ಮತ್ತ ಹೇಳತಾರ.

ಅ:- ಅಂದರ ಏನು ನೀನು ಬಹಳ ಆಜ್ಞಾಧಾರಕಳು ಅಂತ. ಎಲ್ಲರ ಮುಂದ ಸಾರಿ ಹೇಳಲ್ಲಾ ?

ಕ:- ನೀವು ಸಾರಿ ಹೇಳೋದು ಬ್ಯಾಡ. ನನಗ ಅನ್ನೋದು ಬ್ಯಾಡ. ಈಗ ನೀವು ಏನಂತೀರಿ ?

ಅ:- ಹಾಂ! ಹಾಂಗ ಕೇಳಬಾರದ ? ಏನಂದಿರಿ ಅನಬ್ಯಾಡ. ಏನ ಬೇಕು ಅಂತ ಕೇಳು.

ಕ:- ಹೀಂಗ ಯಾಕ ಮಾಡತೀರಿ ಅಂದರ ಖರೇವಂದರೆ ಏನಾರ ಬೇಕಾಗೇದೇನು ? ಹಸಿವಿ ಆಗೇದ ಏನು ? ಉಂಡಿ ಅದ. ತಂದು ಕೊಡಲ್ಯಾ ? ಯಾಕ ಇವತ್ತ ಮಧ್ಯಾನದಾಗ ಏನೂ ತಿನ್ನಲಿಲ್ಲ ?

ಅ:- ತಿಂಡಿ ತೀರ್ಥ ಎಲ್ಲಾ ಆಗೇದ. ಆದರ ನನಗೆ ಏನ ಬೇಕೆಂಬೋದನ್ನ ನಡಿಸಿ ಕೊಡತೀನಿ ಅಂದರ ಹೇಳತೀನಿ.

ಕ:- ಬೇಕಾಗೇದಾರ ಏನು? ಏನು ಸುಮ್ಮನೆ ಚ್ಯಾಷ್ಟಿ ಮಾಡತೀರೋ ? ಎರಡು ಮಕ್ಕಳ ತಂದೆ ಆದಿರಿ. ಇನ್ನ ಹುಡುಗಾಟಿಕಿ ಹೋಗಲಿಲ್ಲ.

ಅ:- ಇಲ್ಲ ಖರೇ ಹೇಳತೀನಿ. ನೀ ಹೂಂ ಅಂದರ ಹೇಳತೀನಿ.

ಕ:- ತಂದದ್ದು ಬೆಂಡೋಲಿ ತೋರಿಸಿರಿ ಅಂದರ ಇಷ್ಟ ಗೋಳಾಡಸಲಿಕ್ಕೆ ಹತ್ತೀರಲ್ಲ.?

ಅ:- ಅಕಾ! ನೀ ಹಾಂಗ ಅಂತೀದಿ ಅಂತ ನನಗ ಗೊತ್ತು.

ಕ:- ಇಲ್ಲ. ಹೇಳಿರಿ. ಕೇಳತೀನಿ.

ಅ:- ನೋಡು ಮತ್ತ ರಾಮು ವಚನ ಹೌದಲ್ಲೊ.

ಕ:- ಅಯ್ಯ, ಹೋಗರೆಂದರ.

ಅ:- ಹೇಳಲ್ಯಾ ?

ಕ:- ಹೇಳರಿ.

ಅ:- ಆಮ್ಯಾಲ ಒಲ್ಲೆ ಅಂದರ ನಾ ಜಗಳಾ ಆಡಾಂವ. ನೋಡು. ರಾತ್ರಿ ಊಟಾ ಸಹಿತ ಮಾಡೋದಿಲ್ಲ.

ಕ:- ನನ್ನ ಹಣೇಬಾರ. ಇದೇನ ಗಂಡಾಂತರಂದರ ? ಹೇಳರಿ. ಕೇಳತೀನಿ.

ಅ:- ಹಾಂ! ತಯಾರಾಗು. ನಮಗ ಇವತ್ತ ಆ ಇದು'ಮಾಧವ ನಿನ್ನ ಮೂರುತಿಯನೆ ನಿಲ್ಲಿಸು, ಎಂಬೋ ಹಾಡು ನಿನ್ನ ಬಾಯಲೆ ಕೇಳಬೇಕಾಗೇದ.

ಕ:- ಥೂ ನಿಮ! ಹೋಗರಿ ಎಲ್ಲಾರ. ಹುಡುಗರು ಮಾಡದ್ಹಂಗ ಮಾಡತೀರಿ.

ಅ:- ಹೌದಲ್ಲೋ ? ನಾನು ಮೊದಲ ಅಂದುಕೊಂಡಿದ್ದೆ. ಹಾಡೋದಿಲ್ಲ ಹೌದಲ್ಲೋ! ನನಗ ಗೊತ್ತಿತ್ತು? ನಿನ್ನ ಹಟಮಾರಿತನ. ಮಂದೀ ಮನಿಗೆ ಹೂ ವೀಳ್ಯಕ್ಕೆ ಹೋದಾಗ, ಲಗ್ನ ಮುಂಜಿವಿಗೆ ಹೋದಾಗ ಹುರುಪಿನಿಂದ ಹಾಡಲಿಕ್ಕೆ ಬರತದ. ನನ್ನ ಮುಂದ ಹಾಡು ಅಂದರ ನಿನಗ ಕುತ್ತಗಿ ಸುತ್ತ ಬರತದ.

ಕ:- ಅಯ್ಯ ಇದೇನು ಅಚ್ಛೆ ಅಚ್ಛೆ ಸುರಸತೀರಿ ಅಂದರ. ಏನು ಹೊಸದಾಗಿ ಲಗ್ನ ಮಾಡಿಕೊಂಡ ಬಂದ್ಹಾಂಗ ಮಾಡತೀರಿ. ೧೨ ವರ್ಷ ಸಂಸಾರ ಆತ್ಯು ಇನ್ನೂ ನಿಮ್ಮ ಈ ಕಿಡಿಗೇಡಿತನ ಹೋಗವಲ್ಲದು.

ಅ:- ಲಗ್ನ ಮಾಡಿಕೊಂಡ ಬಂದ ಹೊಸತಾಗೇರ ನೀ ಎಂದ ಸುರಕ್ಷಿತ ಹಾಡೀದಿ? ಯಾವಾಗಲೂ ಇದೇ ಹಾಡು.

ಕ:- ಹೋಗರೆಂದರ. ಮುಂದ ಕೂತಗೊಂಡು ಹಾಡು ಅಂದರ ನನಗ ಒಲ್ಲೇ ಆಗತದ. ಅದರಾಗ ನನ್ನ ಗಂಟಲ ಬ್ಯಾರೆ ಬಿರಸಾಗೇದ. ಕೆಮ್ಮು ಆಗೇದ. ಖರೇವು. (ಕೆಮ್ಮುವಳು)

ಅ:- (ಸಿಟ್ಟಿನ ನಟನೆಯಿಂದ) ಹೌದೇ! ಆ ನಿನ್ನ ಗಂಟಲಾ ಪೂರಾ ಕೆಟ್ಟೇ ಹೋಗಲಿ. ನನ್ನ ಮಾತು ಅಂದರ ನಿನಗ ಕಾಲಕಸ. ಆಗಲಿ. ಇವತ್ತ ನಮಗ ರಾತ್ರಿ ಉಪವಾಸ ಬರದಾನ ದೇವರು ಹಣೇಬಾರದಾಗ.

ಕ:- ಉಪಾಸ ಯಾಕ ಅಂತ. ಗಾಂಧಿ ಶಿಷ್ಯರಾದರೇನು? ಇಷ್ಟು ಹಟಮಾರಿತನ ಯಾಕ? ಕೂತ ಕೂತಲ್ಲೇ ಏನಾದರು ಕಿಡಿಗೇಡಿತನ ಸುರುಮಾಡತೀರಿ. ನಿಮ್ಮನ್ನ ನೋಡಿಕೊಂಡು ನಿಮ್ಮ ಮಗ ಅಂವಾ ಕೃಷ್ಣನೂ ಇಲ್ಲದ್ದ ಮಾಡತದ. ಏನೇನೋ ಮಾತಾಡಿ ಸೀತಾನ್ನ ರೇಗಸತದ.

ಅ:- ಈಗ ನಿಮಗ ಹೆಂಗಸರಿಗೆ ಸ್ವಾತಂತ್ರ ಇಲ್ಲಂತ. ಇಲ್ಲದೆ ಇದ್ದಾಗ ನಾವು ಗಂಡಸರು ಪರತಂತ್ರ ಆಗೀವಿ. ಇನ್ನ ನಿಮಗೆ ಸ್ವಾತಂತ್ರ್ಯ ಸಿಕ್ಕರ ಗಂಡು ಕಾಯಂ ಕೈದೀನೇ ನೋಡು ನಿಮ್ಮ ಕೈಯಾಗ. ಆಗಲಿ. ಸಿನೀಮಾಕ್ಕಾದರೂ ಹೋಗತೀನಿ.

ಕ:- ಸಿನೀಮಾಕ್ಕ ರೊಕ್ಕ ಖರ್ಚಾಗೊದಿಲ್ಲೇನು? ಪಲ್ಯಕಾಯಿಯೊಳಗ ಜಾಣತನ ಮಾಡತೀರಿ. ಇದಕ್ಕ ಏನೂ ಇಲ್ಲ ಏನೋ?

ಅ:- ಮತ್ತೆ ಏನ ಮಾಡೋದು! ಅಲ್ಯಾದರೂ ಹೋಗಿ ಇಷ್ಟು ಹಾಡು ಕೇಳಿ ಬರತೀವಿ. (ಕೋಟು ಹಾಕಿಕೊಳ್ಳುವನು)

ಕ:- ಇದೇ ನೋಡರಿ, ಗಂಡಸರ ಕೈಯ್ಯಾಗ ರೊಕ್ಕ ಇರತಾವಂತ, ಬೇಕಾದ್ದ, ಮಾಡಲಿಕ್ಕೆತಯಾರಾಗತಾರ. ಹೋಗರಿ. ಅಲ್ಲೆ ನಿಮಗೆ "ಮಾಧವ ನಿನ್ನ ಮೂರುತಿಯನ್ನು ನಿಲ್ಲಿಸೋ'' ಪದ ಹಾಡತಾರ.

ಅ:- ನಮ್ಮ ದೈವದಾಗ ಇದ್ದದ್ದ ಆಗತದ. ನಮ್ಮ ಕೈಯಾಗ ರೊಕ್ಕ ಇದ್ದರೇನು ಸುಟ್ಟತು ನಮಗ ಬೇಕಾದ್ದು ಸಿಗದಿದ್ದರ. (ಹೊರಡಲನುವಾಗುವನು)

ಕ:- ಇರಲಿ ಕೂಡರೆಂದರ. (ಅಡ್ಡ ನಿಂತು) ಹಾಡತೀನ್ರಿ ಕೂಡ್ರಿ. (ಕೂಡುವನು) ಬಲೇ ಜಿದ್ದೀ ಇದ್ದೀರೆಂದರ ನೀವು.

ಅ:- ಯಾಕ ನಿನ್ನ ಕಡಿಂದ ಇಷ್ಟು ಹಂಗಿಸಿಕೊಂಡು ಹಾಡು ಕೇಳ ಬೇಕು! (ಮತ್ತೆ ಏಳುವನು).

ಕ:- ಇಲ್ಲ. ಇಲ್ಲ. ಕೂಡರಿ. ಹಾಡತೀನಿ. (ದನಿ ಸರಿಪಡಿಸಿಕೊಂಡು) ('ಮಾಧವ ನಿನ್ನ ಮೂರುತಿಯನು ನಿಲ್ಲಿಸೋ' ಎಂಬ ಪದವನ್ನು ಪೂರ್ಣ ಹಾಡುವಳು.)

ಅ:- ಅ ಬಾ ಬಾ ಬಾ, ಅಂತೂ ಒಂದು ಕೆಲಸ ನಾವು ಹೇಳಿದ್ದು ಮಾಡಿಸಿಕೋ ಬೇಕಾದರ ನಮ್ಮ ಹಿರೇರು ಮಾಡಿದ ಪುಣ್ಯ ಎಲ್ಲಾ ಖರ್ಚಾತ್ಯ.

ಕ:- ಈಗರಾ ತೋರಿಸತೀರೋ ಇಲ್ಲೋ ?

ಅ:- ಇನ್ನೇನು ತೋರಿಸಿದ್ಹಂಗ ಅದ. (ಚೀಲಾ ಕೊಡುವನು).

ಕ:- (ಒಳಗಿನಿಂದ ಒಂದು ಕಾಗದ ಪುಡಕಿ ತೆಗೆಯುವಳು) ಅಯ್ಯ, ಇದೇನು? ಎಷ್ಟು ಪರಿ ಬಿಗಿ ಕಟ್ಯಾರ. ಇವು ಬೆಂಡೋಲಿ ಯಾಕ ಆದಾವು?

ಅ:- ಬಿಚ್ಚಂತು ಬಿಚ್ಚಲ್ಲ.

(ಕಮಲಾಬಾಯಿ ಪುಡಿಕಿ ಬಿಚ್ಚುತ್ತಿರುವಳು ಕೃಷ್ಣ, ಸೀತೆ ಹುರುಪಿನಿಂದ ಓಡುತ್ತ ಬರುವರು.)

ಕೃ:- ಅಪ್ಪಾ, ಅಪ್ಪಾ, ಅಲ್ಲೀ ರಾಮರಾಯರ ಮನೆ ಮುಂದ ಬಿಜಲಿ ಹಚ್ಯಾರ. ಮತ್ತಿದ್ದರ ಈಗ ಅವರ ಮನಿಮುಂದ ಮಂಗ್ಯಾ ಆಡಸವ ಬಂದಿದ್ದಾ. ಬಸನಿಂಗ ಬಡೇಮಿಯಾ ಅಂತ ಗಂಡ ಹೆಂಡತಿ ಮಾಡಿ ಆಡಿಸಿದ್ಯಾ.

ಸೀ:- ಅಪ್ಪಾ ಗಂಡ ಹೆಂಡತಿ ಸಿಟ್ಟು ಸಿಟ್ಟುಮಾಡಿ ಗುದ್ದಾಡಿದವು.

ಕೃ:- ಅಪ್ಪ ಚಲೋ ಆಡಸಲಿಲ್ಲ.

ಅ:- ಯಾಕೋ?

ಕೃ:- ಬಡೇ ಮಿಯಾ, ಬಸನಿಂಗಿಗೆ ಸಲಾಮು ಮಾಡಿದಾ. ಬೇಡಿ ಕೊಂಡಾ. ಎಷ್ಟಾದರೂ ಬಸನಿಂಗಿ ಭಡಾನೆ ಮಾತೇ ಕೇಳಲಿಲ್ಲ. ಅಲ್ಲಪ್ಪ. ಗಂಡಸು ಹೆಂಗಸಿಗೆ ಸಲಾಮು ಮಾಡಬೇಕೇನು?

ಕ:- (ಪುಡಕಿ ಬಿಚ್ಚಿ ನೋಡಿ) ಅಯ್ಯ ನನ್ನ ಹಣೇಬಾರ. ಇದಕ್ಕ ಇಷ್ಟು ಗೋಳಾಡಿಸಿದರ್‍ಯಾ. ಹೋಗರಿ ನಿಮ. ಇದೇ ಕಿಡಿಗೇಡಿತನಾನೇ. ಆತ್ಯು. ನಿಮ್ಮ ಸಂಗಡ ಇನ್ನಮ್ಯಾಲೆ ಮಾತ ಆಡೋದಿಲ್ಲ. (ಒಳಗೆ ಸಿಟ್ಟಿನಿಂದ ಹೋಗುವಳು).

ಸೀ:- ಅಯ್ಯ ಈ ಎರಡು ಗೊಂಬೀ ಅಪ್ಪಾ, ಥೇಟ ಬಸನಿಂಗಿ, ಬಡೇ ಮಿಯಾ ಇದ್ಹಾಂಗ ಅವ ಅಲ್ಲಪ್ಪ.

ಕೃ:- ಅಲೇಲೆ. ಬಹಳ ಪಸಂದ ಅವ ಆಡಲಿಕ್ಕೆ. ಇವು ನನಗ.

ಅ:- ಹೌದಪ್ಪ. ನೀನೇ ತಗೋ. ಮತ್ತ ನೀನು ಮುಂದ ನಿನ್ನ ಬಸನಿಂಗಿ ಮುಂದ ಸಲಾಮು ಹೊಡಿಬೇಕಾಗೇತದ.

ಸೀ:- ಅಪ್ಪ ಎಷ್ಟು ಛಂದ ಮಾಡ್ಯಾರ ನೋಡು. ಅಗದಿ ಕಿಡಿಗೇಡಿತನ ಎದ್ದು ಕಾಣಸತದ ಈಮುಂಗ್ಯಾಗಳ ಮಾರೀಮ್ಯಾಲ. ಹೌದಪ್ಪ. ಕೃಷ್ಣ ಹೀಂಗೆ ಮಾಡತಾನ.

ಕೃ:- ನೀನೇನ ಕಮ್ಮಿ ಇದ್ದೀ.

ಅ:- ಕಿಡಿಗೇಡಿತನ ಇರಬೇಕಪ್ಪ (ಜೇಬಿನಿಂದ ತೆಗೆದು) ಇಲ್ಲಿ ನೋಡು ಇವು ಬೆಂಡೋಲಿ ತಗೋ. ನಿಮ್ಮ ತಾಯಿಗೆ ಕೊಡು. ಆಕಿ ಸಿಟ್ಟಾಗ್ಯಾಳ. ಆದಕ ಇವನ್ನ ಕೊಡು.

ಸೀ:- ಅಪ್ಪಾ ತಂದೀದೇನು ಬೆಂಡೋಲಿ. ಕೋಡೋಣ ನಡೀರಿ ಅವ್ವಗ.

(ಎಲ್ಲರೂ ಒಳಗೆ ಹೋಗುವರು)

(ಹೈದರಾಬಾದು ಆಕಾಶವಾಣಿಯಿಂದ ಪ್ರಸಾರಿತವಾದದ್ದು)



# ವ್ಯವಹಾರ ಜ್ಞಾನ

## ಪಾತ್ರಗಳು

ಯಶೋದಾಬಾಯಿ:- ವಯಸ್ಸು ೫೦. ವಿಧವೆ.

ಹರಿದಾಸಜಿ:- ಯಶೋದಾಬಾಯಿಯ ಹಿರಿಯ ಮಗ. ವಯಸ್ಸು ೩೪. ರೀಗಲ್ ಎಲಿಕ್ಟ್ರಿಕ್ ಸ್ಟೋರಿನ ಒಡೆಯ.

ಗುರುದಾಸ:- ಯಶೋದಾಬಾಯಿಯ ಕಿರಿಯಮಗ. ವಯಸ್ಸು೨೪

ಲತಾದೇವಿ:- ಗುರುದಾಸನ ಪತ್ನಿ. ವಯಸ್ಸು ೧೮

ತ್ರ್ಯಂಬಕಲಾಲ:- ಹರಿದಾಸನ ತಂದೆಯ ಬಾಲ್ಯಸ್ನೇಹಿತ. ವ್ಯಾಪಾರಿ.

ಖುರ್ಷೀದಲಾಲ:- ಸರಕಾರಿ ಸೆಂಟ್ರಲ್ ಸ್ಟೋರಿನ ಅಧಿಕಾರಿ. ಯಶೋದಾಬಾಯಿಯ ತವರೂರಿನವ.

ಷೇಖು:- ಖುರ್ಷೀದಲಾಲರ ಜವಾನ.

### ೧

(ಸೆಂಟ್ರಲ್ ಸ್ಟೋರಿನ ಕಚೇರಿ. ಅಧಿಕಾರಿ—ಖುರ್ಷಿದ್‌ಲಾಲ ಅವರ ಕೋಣೆ. ಬರೆಯುತ್ತಿದ್ದಾರೆ. ಟೆಲಿಫೋನ ಗಂಟೆಯಾಗುತ್ತದೆ. ಟೆಲಿಫೋನ್ ಎತ್ತಿ)

**ಖು:-** ಹಲ್ಲೊ! ಖುರ್ಷಿದ್‌ಲಾಲ speaking. This is Central stores, yes. Good after noon. Who is it? ಆಹಾ, ನೀವೆ? ಏನು ಸುದ್ದಿ, ತ್ರ್ಯಂಬಕ್ ಲಾಲಜಿ? ಹೌದು. ಹೌದು, ನಿನ್ನೆ ಹೆರಿಗೆ ಆಯಿತು. ಆಂ. ಹೌದು. ನಾವೇನೊ ಬಹಳ ತೊಂದರೆ ಆದೀತು ಅಂದುಕೊಂಡಿದ್ದೆವು. ಆದ್ರೆ ತೀವ್ರ ಹೆರಿಗೆ ಆಯ್ತು. ಅದೇ, ಆ ನಿಮ್ಮ Royal Maternity Home ನಲ್ಲಿ. ಎಂಟು ವರ್ಷ ಆಗಿತ್ತು

ಮದುವೆ ಆಗಿ. ಹೌದು ಈಗ ದೇವರು ನಮ್ಮ ವ್ಯಾಲ ಕೃಪಾ ಮಾಡಿದ. ನಿಮ್ಮೆಲ್ಲಾರ ಆಶೀರ್ವಾದ. ಹಾಂ! ಮತ್ತೇನ ಸುದ್ದಿ? ನಿಮ್ಮ Quotations ಬಂದಿದೆ........ಒಂದು ಅರ್ಧ ತಾಸು ಬಿಟ್ಟು ಬನ್ನಿರಿ. ಆಗಲಿ ನಮಸ್ಕಾರ.

(ಟೆಲಿಫೋನ ಇಡುವನು)

**ಜವಾನ:**- (ಪ್ರವೇಶಿಸಿ) ಸಾರ್, ಈ ಚೀಟಿ ಕೊಟ್ಟವರು ಈಗಲೇ ನಿಮ್ಮನ್ನ ಕಾಣಬೇಕು ಅಂತಾರೆ.

**ಖು:**- ಇನ್ನು ಅರ್ಧ ತಾಸು ತಡಿ ಅಂತ ಹೇಳಯ್ಯ. ಕ್ಷಮಿಸು ಅಂತ ಹೇಳು.

ಜ:- ಹೇಳಿದೆ. ಆದರೆ ಅವರು ಬಹಳ.........ಇಕಾ ಬಂದೇ ಬಿಟ್ಟರು.

**ಗುರು:**- (ಒಳನುಗ್ಗಿ ಬಂದು) Good After noon........ Good After noon....I said Good After noon.... May I come in, sir?

**ಖು:**- ಅಂ! who is it?

**ಗುರು:**- ತಾವು ಬರೆದ ಪ್ರಕಾರ ಬಂದೀನಿ.

**ಖು:**- ಯಾರು? ಹಾಂ! ಒಂದು ಹದಿನೈದು ಮಿನೀಟು ತಡೆಯಿರಿ.

**ಗುರು:**- ಕ್ಷಮಿಸಿ. ನಾನು ಈಗ ಒಂದು ತಾಸಿನಿಂದ ಹೊರಗ ಕೂತೀನಿ. ಒಂದು ಎರಡು ಮಿನೀಟಿನೊಳಗಾಗಿ ನಿಮಗ 'ಪಂಖಾ' ತೋರಿಸಿಬಿಡತೀನಿ.

**ಖು:**- ಊಂ. (ಬರೆಯುತ್ತಲೆ ಇದ್ದಾರೆ)

**ಗುರು:**- ತಾವು ಸ್ವಲ್ಪ ನಾನು ಹೇಳೋದನ್ನ ಕೇಳಬೇಕು, ಅಂತ ಬೇಡತೀನಿ.

**ಖು:**- (ಬರೆಯುವದನ್ನು ನಿಲ್ಲಿಸಿ) **Mr. I told you to come after half an hour.**

**ಗುರು:**- Yes sir. But I am already waiting since one hour.

**ಖು:**- Had you appointed the time previously ?

**ಗು:**- ಅಲ್ಲಾ Sir ನಿಮ್ಮ ಕಚೇರಿಯಿಂದ ಈ Letter ಬಂದಿದೆ, ನೋಡಿ. During the office hours ಬನ್ನಿ ಅಂತ.

**ಖು:**- ಊಂ. ಕೆಲಸವಿದ್ದಾಗ ತುಸು ತಡೆಯಲಾಗದೆ ?

**ಗು:**- ಅದು ನಿಜ. ಕ್ಷಮಿಸಿ. ನಾನು ಇನ್ನೂ ಊಟಾ ಮಾಡಿಲ್ಲ.

**ಖು:**- ಓ! ಹೀಗೋ! ಹೌದು ನಿಮ್ಮ ಮುಖ ಬಾಡಿದೆ. ತಲೆ ಕೆದರಿದೆ. ಗಡ್ಡ ಬೆಳದಿದೆ.

**ಗು:**- ಸಾರ್ ನಾನು ಒಂದು Fan ತಂದೀನಿ ತೋರಸಲಿಕ್ಕೆ.

**ಖು:**- ಯಾವುದು ?

**ಗುರು:**- 'ಉಷಾ' ತಂದೀನಿ

**ಖು:**- G. E. C. ಅಂತಾ ಬರೆದಿಲ್ಲವೆ ನಾವು ಕಾಗದದಲ್ಲಿ ?

**ಗು:**- ನಿಮಗೆ ಬೇಕಾಗೋ ಅಷ್ಟು G. E. C. ಪಂಖಾ ಒಂದು ಒಂದು ವಾರದೊಳಗ ಬೇಕು ಅಂದರ ಮಾರ್ಕೆಟ್‌ನಲ್ಲಿಯೇ ಸಿಕ್ಕೋಲ್ಲ.

**ಖು:**- ನಿಮ್ಮ ಸುದ್ದಿ ನೀವು ಹೇಳ್ರಿ. ಇಡೀ ಮಾರ್ಕೆಟ್ಟಿನ ಪ್ರತಿನಿಧಿತ್ವ ಯಾಕೆ ?

**ಗು:**- ನಿಮಗೆ ಮಾರ್ಕೆಟ್ಟಿನ ವಿಷಯ ಗೊತ್ತಿಲ್ಲ, ಸಾರ್, ಕ್ಷಮಿಸಿ. ನಮ್ಮ ಅಣ್ಣಾ ಹೇಳಿದಾ, ನಾ ಹೇಳೀನಿ ಹೇಳು ಅಂತಾ. G. E. C. ನೂ ಇದೆ ಆದರೆ........

**ಖು:**- ಆದರೆ ಗೀದರೆ ಏನೂ ಇಲ್ಲಾ ಕ್ಷಮಿಸಿ. G. E. C. ಇಲ್ಲದೆ ಇದ್ದರೆ ಬೇಡ. All right.

**ಗುರು:**- ಅಲ್ಲಾ ಸಾರ್. ತಾವು ಸಿಟ್ಟಾದಿರಿ. ನಮ್ಮ ಅಣ್ಣ ಹೇಳಿದ್ದರು.

**ಖು**:- (ಸಿಟ್ಟಿನಿಂದ) ನಾನೇಕೆ ಸಿಟ್ಟಾಗತೇನಯ್ಯಾ! ನಮ್ಮ ಮನೀ ಕೆಲಸಕ್ಕೆ ಕರಿಸಿಲ್ಲ ನಿಮ್ಮನ್ನ........ನಿಮ್ಮ ಅಣ್ಣ ಯಾರು?

**ಗು**:- ನಿಮಗೆ ಗೊತ್ತಿಲ್ಲವೆ? ರೀಗಲ್ ಎಲಿಕ್ಟ್ರಿಕ್ ಸ್ಟೋರ್ಸಿನ ಹರಿ ದಾಸಜಿ.

**ಖು**:- ಓಹೋ ನೀವು ಅವರ ತಮ್ಮನೇ?

**ಗು**:- ಹೌದು.

**ಖು**:- ಏನೋ ಅಪ್ಪ

**ಗು**:- ತೋರಸಲಾ ಪಂಖಾನಾ 'ಉಷಾ' ತಂದೀನಿ.

**ಖು**:- 'ಉಷಾ' ಅಂತೀಯಲ್ಲಯ್ಯ ಮತ್ತೆ. ನಮಗದು ಬೇಡ.

(ಟೆಲಿಫೊನ್ ಗಂಟೆ. ಟೆಲಿಫೊನ ಎತ್ತಿ) ಹಲ್ಲೋ! Yes. I am speaking. ಹಾಂ. Yes sir. I am arranging for it, well sir. All right sir. (ಟೆಲಿಫೋನ್ ಕೆಳಗಿಟ್ಟು) ಉಶ್ಶ ಅಪ್ಪಾ (ಗಂಟೆ ಬಾರಿಸುವನು. ಸ್ವಗತ) ತೋ ಬಾ ತೋ ಬಾ. ಎಷ್ಟು ಅವಸರ ಪಡಸತಾರೆ ಸಾಹೇಬರು? (ಜವಾನ ಬರುವನು) ಅದು ಟೈಪ್ ಮಾಡಲಿಕ್ಕೆ ಕೊಟ್ಟಿದ್ದು ತರಲಿಲ್ಲಲ್ಲ. ಎಷ್ಟು ಹೊತ್ತು?

**ಜವಾನ್**:- ಇವೊತ್ತು ಇನ್ನೊಬ್ಬ Typist ಬಂದಿಲ್ಲಾ ಸಾರ್. ಒಬ್ಬನೆ ಆಗಿದ್ದಾನೆ. ಈಗ ಕೊಡತೀನ ಅಂತ ಅಂದರು.

**ಖು**:- ಅಯ್ಯೋ! ಹೀಗೆಯೆ? ಆಗಲಿ ಬೇಗ ತಾ ಅಂತಾ ಹೇಳು.

[ ಜವಾನ ಹೋಗುವನು ]

**ಗುರು**:- ನನಗೆ ಏನು ಅಪ್ಪಣೆ ಆಗತದೆ?

**ಖು**:- ಅಪ್ಪಣೆ ಕೊಡಲಿಕ್ಕೆ ನಾನೇನು ನಿಮ್ಮ ಮೇಲಧಿಕಾರಿಯೆ?

**ಗುರು**:- ನೀವು ಅಧಿಕಾರಿಗಳು ಹೌದು ತಾನೆ? ಅಪ್ಪಣೆ ಕೊಡ ತಕ್ಕವರೇ.

**ಖು**:- ಇರಲಯ್ಯ. ಕ್ಷಮಿಸಿ.

**ಗುರು:**- ಅಂದರೆ........

**ಖು:**- ಅಂದರೆ ಗಿಂದರೆ ಏನು ಬೇಡ ಸ್ವಾಮಿ. ನನಗೀಗ ಸಮಯ ಇಲ್ಲ.

**ಗುರು:**- ನೀವು ಬಾ ಅಂತ Letter ಬರೆದದ್ದಕ್ಕ ಬಂದೀನಿ ಸಾರ್.

**ಖು:**- ಕಾಗದ ನಿಮಗೆ ಬರೆದದ್ದೀತಪ್ಪು ಆದ ಹಾಗೆ ಇದೆ.

**ಗುರು:**- ನಮಗೆಲ್ಲ ಈ ಆರ್ಡರು ಯಾಕ್ ಸಿಕ್ಕಾವು? (ಗೊಣಗುತ್ತ)

**ಖು:**- ಸುಮ್ಮನೇ ಗೊಣಗ ಬೇಡಿ. (ಗಂಟೆ ಬಾರಿಸಿ) All right.

**ಗುರು:**- All right, sir. Thank you. ನಮಸ್ಕಾರ.

[ ಖುರ್ಷಿದ್‌ಲಾಲನ ಕೋಣೆಯು ಹೊರಗೆ, ಗುರುದಾಸ ಬರುತ್ತಾನೆ. ಎದುರಿಗೆ ತ್ರ್ಯಂಬಕ್‌ಲಾಲನ ಭೇಟಿ ಆಗುತ್ತದೆ. ]

**ತ್ರ್ಯಂ:**- ಏನು ಗುರುದಾಸ! ವ್ಹಾ! ನೀನೆ ಹುಷಾರಪ್ಪ. ಆಗಲೇ ಸಾಹೇಬರನ್ನ ಕಂಡು ಹೊರಟು ಬಿಟ್ಟೆ. ನಾವಿನ್ನೂ ತಿರಗತಾನೇ ಇದ್ದೀವಿ.

**ಗುರು:**- ಏನು ಸಾಹೇಬರೋ ಏನೋ!

**ತ್ರ್ಯಂ:**- ಯಾಕಯ್ಯ?

**ಗುರು:**- ಏನಿಲ್ಲ. ಈ ಅಧಿಕಾರಿಗಳೋ!

**ತ್ರ್ಯಂ:**- ಹೌದು ಹೌದು ಸ್ವಲ್ಪ ಹುಷಾರಾಗಿರಬೇಕು. ಇವರ ಸಂಗಡ.

**ಗುರು:**- ಇವರಿಗೆಲ್ಲಾ ಯಾಕ ಹೆದರಬೇಕು, ಕಾಕಾ?

**ತ್ರ್ಯಂ:**- ಹೆದರಿಕೆ ಯಾಕ ಬಿಡು! ಮೀನಾ ಹಿಡೀಬೇಕಾದರ ಜಾಳಿಗೆ ತುದೀಗೆ ಹುಳಾ ಕಟ್ಟಿ ನೀರಾಗ ಬೀಸೋದಲ್ಲ? ಹಾಂಗ ಮಾಡಬೇಕು ಅಂದೆ.

**ಗುರು:**- ನನ್ನ ಕಡೀಂದ ಆಗದ ಮಾತು ಬಿಡು. ಅಲ್ಲ, ಕಾಕಾ, ಮಾರ್ಕೆಟ್ಟಿನಾಗ ಹುಡಕಿದರ G.E.C. ಪಂಖಾ ಸಿಗೋದಿಲ್ಲಾ. G.E.C ನೇ ಬೇಕು ಅಂತ ಹಟ ಮಾಡಿದರ?

ತ್ರ್ಯಂ:- ಹಿಂಗ್ಯ! ನೀನು ಹೇಳಬೇಕಿತ್ತು ಮಾರ್ಕೆಟ್ಟಿನಲ್ಲಿ ಇಲ್ಲಾ ಅಂತ.

ಗುರು:- ಹೌದು ಕಾಕಾ ನಿನಗಂದರ ಹೇಳಿದರ ಕೇಳತೀದಿ. ನೀನೇ G. E. C. ಬೇಕಾದರ ನಮ್ಮಲ್ಲಿಂದನ ಒಂದು ತರಿಸಿಗೊಂಡೆಪ್ಪ ನಿನ್ನೆ.

ತ್ರ್ಯಂ:- ಹಾಂಗಾದರೆ ನಾನಾರೆ ಹೋಗಿ ಯಾಕ ಭೆಟ್ಟಿ ಆಗಲಿ?

ಗುರು:- ಹೌದು! ಮತ್ತೇನದ?

ತ್ರ್ಯಂ:- ಈಗ ನೀನು ಎಲ್ಲಿಗೆ ಹೊರಟೇದಿ.

ಗುರು:- ಮನೀಗೆ.

ತ್ರ್ಯಂ:- ಮನೀಗೆ? ಹೋಗು ಹಂಗಾರ. ಹಿಂದಿಂದೊಂದು ಬಿಲ್ ಪಾಸಾಗೋದದ ಇಲ್ಲೆ. ಅದನ್ನಾರ ಕೇಳಿ ಬರತೀನಿ.

ಗುರು:- ಏನಾರೆ ಮಾಡು. ನಾ ಹೊರಟೆ ನಮಸ್ಕಾರ.

ತ್ರ್ಯಂ:- (ಜವಾನನ ಸಮೀಪಕ್ಕೆ ಬಂದು) ಹಾಂ! ಏನಯ್ಯ ಷೇಖು ನಿನ್ನ ಹಿರೇ ಹುಡಗ ಏನು ಓದತಾನ?

ಜ:- ಈ ಸಾರೆ ಮ್ಯಾಟ್ರಿಕ್ ಪರೀಕ್ಷಾಕ್ಕ ಕೂತಾನ.

ತ್ರ್ಯಂ:- ಅಚ್ಛಾ. ವ್ಹಾ ವ್ಹಾ. ನೆಟ್ಟಗಾಯಿತು.

ಜ:- ಏನರಿ. ಬಡವರು ನಾವು.

ತ್ರ್ಯಂ:- ನಿನ ಮಗ ಪಾಸಾದ ಕೂಡಲೇ ನನ್ನ ಹತ್ತರ ಕರಕೊಂಡು ಬಾ. ಇಂಟರ್‌ನೊಳಗ Admission ಕೊಡಸತೀನಿ.

ಜ:- ಆಗಲರಿ, ಸೇಟ ಸಾಬ! ನಿಮ್ಮ ಮನಿಸ್ಯಾ ಒಪಂಖಾ ತಂದಿಟ್ಟು ಹೋಗ್ಯಾನಲ್ಲ.

ತ್ರ್ಯಂ:- ಅವನ್ನ ಸಾಹೇಬರ ಕೋಣೆಗೆ ತರಬೇಕಲ್ಲ ಈಗ.

( ಒಳಗೆ ಗಂಟೆಯಾಗುವದು. ಜವಾನನು ಒಳಗೆ ಹೋಗಿ ಕಾಗದ ದೊಡನೆ ಬಂದು )

ಜ:- ಸಾಹೇಬರು ನಿಮಗ ಒಳಗ ಬಾ ಅಂದರು ನಡೀರಿ.

ತ್ರ್ಯ:- ಒಳ್ಳೇದು ಆ ಪಂಖಾ ತಗೊಂಡು ಬಾ. (ಒಳಗೆ ಬರುವನು) ನಮಸ್ಕಾರ ಖುರ್ಷಿದಲಾಲ ಸಾಹೇಬರಿಗೆ.

ಖು:- ಬನ್ನಿ ನಮಸ್ಕಾರ. ಕೂಡರಿ.

ತ್ರ್ಯಂ:- ನಿಮ್ಮ ಮೊಮ್ಮಗ ಚುರುಕಾಗಿದ್ದಾನೆ. ಚೆನ್ನಾಗಿದ್ದಾನೆ.

ಖು:- ಅರೇ! ನಾನೇ ಇನ್ನೂ ನೋಡಿಲ್ಲ. ನೀವು ನೋಡಿದಿರಾ.

ತ್ರ್ಯಂ:- ದಾರಿಯಲ್ಲೇ Royal Maternity Home ಉ ನಿಮ್ಮ ಮಗ ಹೊರಗೆ ನಿಂತಿದ್ದರು. ಮಾತಾಡಿಸಿದರು. ಒಳಗೆ ಹೋಗಿ ನಿಮ್ಮ ಮೊಮ್ಮಗನ ದರ್ಶನಾನು ತಗೊಂಡೆ.

ಖು:- ಓಹೋ ಹಾಗಾದರೆ ನೀವೇ ನನಕಿಂತ ಮುಂದಾದರಿ.

ತ್ರ್ಯಂ:- ತಾವು ಈ ದಿನ ಸಾಯಂಕಾಲ ನೋಡಿ ಬನ್ನಿ. ಚೆನ್ನಾಗಿದಾನೆ. ನಮಗೆ ಮಿಠಾಯಿ ಕೊಡಬೇಕಲ್ಲ!

ಖು:- ಅವಶ್ಯ ಕಳಿಸಿ ಕೊಡತೀನಿ ಮಿಠಾಯಿ........ಹಾಂ ಪಂಖಾ ತಂದಿದ್ದೀರಾ?

ಜ:- ಇಲ್ಲೇ ಇಟ್ಟೇನಿ. ನೋಡರಿ.

ಖು:- ಓಹೋ ಮೂರು ತರದವು ಇವೆ.

ತ್ರ್ಯಂ:- ನಿಮಗ ಬೇಕಾದ್ದನ್ನ ಆರಿಸಿಕೊಳ್ಳಿರಿ. ಹಚ್ಚಯ್ಯಾ ಪೇಖು ಒಂದೊಂದೆ.

ಖು:- ಮಧ್ಯೆ ಇಡೆಯಲ್ಲಾ ಅದು ಅಂದವಾಗಿದೆ.

ತ್ರ್ಯಂ:- ಆದರೆ G. E. C. ನೇ ಕೊಳ್ಳಬೇಕು ಅಂತ ನಿಮ್ಮ ಆಫೀಸರರು ಹೇಳಿದ್ದಾರೇನೊ?

ಖು:- ಈ ವಿಷಯದೊಳಗೇನು ಅವರು ಕೈ ಹಾಕೋದಿಲ್ಲಾ. ಒಳ್ಳೆಯವು ಇರಬೇಕು ಆಯಿತು. G. E. C. ಆದರ ನೆಟ್ಟಗಿರತಾವಂತ.

ತ್ರ್ಯಂ:- ಹೌದು ಅವು ಹೆಸರು ಪಡದಾವ. ಎಷ್ಟಾದರೂ ನೋಡರಿ ಇಂಗ್ಲಂಡಿನವು. ಇಂಗ್ಲಂಡಿನ ಸಾಮಾನು ಅಂದರ ನಾವು ಮೊದಲಿಂದಲೂ ಮೆಚ್ಚತೀವಿ. ಈಗ ಸ್ವತಂತ್ರ ಆದರ ಏನಂತ.

ಖು:- ಅಲ್ಲರಿ ನಮ್ಮ ದೇಶದಾಗೂ ಅಷ್ಟೇ ಉತ್ತಮ ಹೊರಟರ ತಗೋಳ್ಳಿಕ್ಕೆ ಏನೂ ಆಡ್ಡೀ ಇಲ್ಲ.

ತ್ರ್ಯಂ:- ಸ್ವಲ್ಪ ನಿಮ್ಮಂಥವರು ಉತ್ತೇಜನ ಕೊಡಬೇಕಾಗತದ. ನೋಡರಿ ಇದು G. E. C ಅಲ್ಲಾ. ಗಾಳಿ ಹ್ಯಾಂಗ ಅದ? G. E. C ನೂ ನೋಡಿದಿರೆಲ್ಲ.

ಖು:- ಪರವಾ ಇಲ್ಲಾ. ನೋಡಲಿಕ್ಕೂ ಅಂದವಾಗೇದ (ಟೇಲಿ ಫೋನ್‌ಗಂಟಿ) (ಟಿಲಿಫೋನ ಎತ್ತಿ) ಹಲ್ಲೊ. Yes, Khurshidlal. ಏನು ಬಸವಂತರಾಯರೇ ಹೌದು ಹೌದು ಬಿಸಿಲು ಆಗಲೇ ಹೆಚ್ಚು ಆಗೇದ. ಮತ್ತ ನಿಮಗಾಗಿಯೇ ಪಂಖಾ ಖರೀದಿ ನಡಿಸೀನಲ್ಲ........ಆಂ....ಒಂದು ವಾರದೊಳಗ ನಿಮಗ ಕಳಸಿತೀನಿ....ಯಾಕೆ? ತೀವ್ರ ಬೇಕೋ.... ಎಷ್ಟು ಬೇಕು? ಮೂರು ಡಜನ್ನೇ? ಆಗಲಿ....ನಮಸ್ಕಾರ (ಟಿಲಿಫೋನ ಕೆಳಗಿಟ್ಟು) ಏನರಿ ತ್ರ್ಯಂಬಕ್‌ಲಾಲಜಿ ತೀವ್ರ supply ಆಗಬೇಕಲ್ಲ.

ತ್ರ್ಯಂ:- Tender pass ಆಗ ಬೇಕೇನಲ್ಲ.

ಖು:- ಇದೇನು ದೊಡ್ಡ supply ಅಲ್ಲ. ಸಣ್ಣದು. ತೀರ Minor ಅದರ ವಿಷಯ ಕಾಳಜಿ ಬಿಡರಿ. ಏನಂತೀರಿ?

ತ್ರ್ಯಂ:- ಹಾಂಗಿದ್ದರ ಕೊಡತೀನಿ ನಿಮಗೆ G. E. C. Supply ಮಾಡತೀನಿ. ಏನು ಒಂದು ೩-೪ ವಾರದೊಳಗ ಬಂದು ಬಿಡತಾವ.

ಖು:- ಅಬಾಬಾ ೩-೪ ವಾರ !

ತ್ರ್ಯಂ:- ಮುಂಬಯಿಯೊಳಗ ನಮ್ಮ ಆರ್ಡರ್ ಬುಕ್ ಆಗಿ ಬಿಟ್ಟದ ಆಗಲೇ. ಏನು ಬಂದು ಬಿಡತಾವ ಒಂದೆರಡು ವಾರದೊಳಗ ಬೇಗ.

ಖು:- ಈ ಎರಡನೇ ತರದವು?

ತ್ರ್ಯಂ:- ಅವನ್ನ ನಾಳಿಗೆ ಕಳಸತೀನಿ ನಾಕ ಡಜನ್ನ.

**ಖು:-** ಇವು ಸಾಧಾರಣ ನೆಟ್ಟಗ ಅವ. Indian ಆದರ ಏನಂತ. ನಾಕು ಡಜನ್ ಕಳಸರಿ. ಉಳಿದವು G. E. C ಆ ಮ್ಯಾಲ ಕಳಸರಿ.

**ತ್ರ್ಯಂ:-** ಆಗಲಿ. Thanks. ನಾಳಿಗೆ Orders ಕಳಸತೀನಿ.

**ಖು:-** ಇವತ್ತೇ ಸಾಯಂಕಾಲ.

**ತ್ರ್ಯಂ:-** Thanks. ನಮಸ್ಕಾರ. ಬರಲಾ. ನಿಮ್ಮ ಮಮ್ಮಗನ ನಾಮಕರಣದ ದಿವಸ ನಮ್ಮನ್ನ ಮರೀಬ್ಯಾಡರಿ.

**ಖು:-** ವ್ಹಾ. ನಿಮ್ಮನ್ನು ಹ್ಯಾಂಗ ಮರೀತೀನಿ. ಒಳ್ಳೇದು, ನಮಸ್ಕಾರ.

[ ಹರಿದಾಸನ ಮನೆ. ಹರಿದಾಸ ಮತ್ತು ಯಶೋದಾಬಾಯಿ ಭೋಜನಶಾಲೆಯಲ್ಲಿ ಕುಳಿತಿದ್ದಾರೆ. ]

**ಹರಿದಾಸ:-** [ಕೈ ಗಡಿಯಾರವನ್ನು ನೋಡಿ] ಇನ್ನೂ ಬರಲಿಲ್ಲ ಗುರು. ಒಂದು ಹೊಡೀತು.

**ಯಶೋದಾಬಾಯಿ:-** ನೀನು ಉಂಡು ಬಿಡು. ಅವಗ ತಡಾ ಇದ್ಹಾಂಗ ಆದ. ಎಲ್ಲಿಗೆ ಹೋಗ್ಯಾನ ಇವತ್ತ ?

**ಹರಿ:-** ನಿಮ್ಮೂರ ಆ ಖುರ್ಷಿದ್‌ಲಾಲರ ಕಚೇರಿಗೆ ಹೋಗ್ಯಾನ. ಇಬ್ಬರಿಗೂ ಪರಿಚಯನೂ ಇಲ್ಲ. ಆ ಮನುಷ್ಯ ಸ್ವಲ್ಪ ತೀಕ್ಷ್ಣ. ಇವನ ಅನಕಾ ಕೇಳೋದೇನದ. ಅದಕ್ಕ ಕಾಳಜಿ.

**ಯಶೊ:-** ನೀನೆ ಹೋಗಬೇಕಾಗಿತ್ತು.

**ಹರಿ:-** ಆದರ ಅವನಿಗೂ ಅನುಭವ ಬರಲಿ. ನಾಲ್ಕು ಕಡೆ ತಿರುಗಿ, ಹತ್ತಾರು ಜನರ ಸಂಗಡ ಸಂಭಂದ ಬಂದು, ಕಷ್ಟ ಸುಖಗಳ ಅನುಭವ ಆದರ, ಮನುಷ್ಯ ಸುಧಾರಸತಾನ.

**ಯಶೊ:-** ಅದು ಸರಿ. ವ್ಯವಹಾರ ಜ್ಞಾನ ಬರಬೇಕಾದರ ನಾಲ್ಕು ಜನರೊಳಗ ಓಡಾಡಬೇಕು. ಸರಿ ಮಾಡಿದಿಬಿಡು. ಅಂವಾ ತಪ್ಪಿದರ ತಿದ್ದಿ ಹೇಳಲಿಕ್ಕೆ ಬಂದೀತಂತ. ನೀನು ಊಟಕ್ಕ ಕೂಡು.

**ಹರಿ:-** ಆಗಲಿ. ಉಂಡು ಅಂಗಡಿ ಕಡಿಗೆ ಹೋಗೋದದ.

**ಯಶೊ:-** ಲತಾ. ಹರೀಗೆ ಊಟಕ್ಕೆ ಬಡಿಸಿಬಿಡಮ್ಮ.

**ಲತಾ:-** (ಪ್ರವೇಶಿಸಿ) ಹೌದು ಭಾವಜಿ. ನೀವು ಉಂಡು ಬಿಡರಿ. ನೀವು ಈ ದಿನ ಬೆಳಿಗ್ಗೆ ಕೂಡ ಫಳಾರ ಸರಿಯಾಗಿ ಮಾಡಿಲ್ಲ. ತಾಟು ಬಡಿಸೇ ಇಟ್ಟೇನಿ. ನಿಮ್ಮ ಮಣಿ ಕೆಳಗೆ. ಮುಂದಕ ಅದನ್ನ........

**ಹರಿ:-** ಹಾಂ! ಹಾಂ! ಒಳ್ಳೇದು (ತಾಟು ಮುಂದಕ್ಕೆ ಎಳೆದು ಕೊಂಡು ಊಟ ಆರಂಭಿಸುವನು.)

**ಯಶೋ:-** ಮುಂಜಾನೆ ಸೀ ಸಜ್ಜಿಗಿ ಚೆನ್ನಾಗಿತ್ತಲ್ಲ ಹರಿ ?

**ಹರಿ:-** ಚೆನ್ನಾಗಿತ್ತಮ್ಮ. ನನಗೆ ಹಸಿವಿ ಸರಿಯಾಗಿರಲಿಲ್ಲ. ಲತಾ-ಬಾಯಿ ಅಡಿಗಿ ಚೆನ್ನಾಗಿ ಮಾಡತಾಳ.

**ಯಶೋ:-** ಒಬ್ಬಳೆ ಎಲ್ಲಾ ಕೆಲಸ ಮಾಡಿಕೋತಾಳಪ್ಪ. ನನ್ನಿಂದಂತೂ ಯಾವ ಕೆಲಸಾನೂ ಆಗೋದಿಲ್ಲ.

**ಹರಿ:-** ನಿನ್ನ ಹಿರೇ ಸೊಸಿ, ತವರು ಮನಿಗೆ ಹೋಗಿ ಎರಡು ತಿಂಗಳಾಯಿತಲ್ಲ. ಕರಿಸಿಬಿಡೋಣ

**ಲತಾ:-** ಪಲ್ಯಾ ಹ್ಯಾಂಗ ಆಗೇದ ಭಾವಜಿ. ಇನ್ನಷ್ಟು ಹಾಕಲಾ.

**ಹರಿ:-** ಚೆನ್ನಾಗಿದೆ ಹಾಕು. ಪುರೀ ಹಾಕಮ್ಮ ಯಾಕ,ಲತಾಬಾಯಿ, ನಿಮ್ಮ ಅಕ್ಕನ್ನ ಕರಿಸಿಬಿಡೋಣ.

**ಲತಾ:-** ಆಗಲಿ ಇನ್ನು ಒಂದು ತಿಂಗಳು. ಅವರ ಮನಿಯೊಳಗವುದವಿ ಆಗೋದದಂತಲ್ಲ. ಆದ ಮ್ಯಾಲ ಬರಲಿ. ಹೌದಲ್ಲ ಅತ್ತೆಮ್ಮ.

**ಯಶೋ:-** ಹೂಂ. ಆಗಲಿ ಇನ್ನೂ ಒಂದು ತಿಂಗಳು. ಲತಾ, ಅನ್ನ ಬೇಕೇನೋ ಹಾಕು (ಲತಾ ಒಳಗೆ ಹೋಗುವಳು)

**ಹರಿ:-** ಅಮ್ಮಾ,ಲತಾ ಎಷ್ಟು ಒಳ್ಳೆಯವಳಾಗಿದ್ದಾಳೆ.ಗುರುಸುಮ್ಮನೇ ಅವಳ ಬಗ್ಗೆ ದೂರತಾನೆ. ಅವಳ ಸಂಗಡ ಸರಿಯಾಗಿ ಇರಲಿಕ್ಕೆ ಬರಲೊಲ್ಲದು ಅವನಿಗೆ.

**ಯಶೋ:-** ಏನು ಮಾಡೋದಪ್ಪ. ಏನಾದರೂ ಒಂದು ತಪ್ಪು ತಗಿಯೊದರೊಳಗ ಇರತಾನ. ಎಂದ ಆತಗ ವ್ಯವಹಾರಜ್ಞಾನ ಬರತದೋ ಏನೋ.

**ಲತಾ:-** (ಪ್ರವೇಶಿಸಿ ಅನ್ನ ಹಾಕಿ) ಅನ್ನ ಸಾಕಃಭಾವಜಿ....? ಯಾರ ಸುದ್ದಿ ಅತ್ತೆಮ್ಮ....?

**ಯಶೋ:-** ನಿನ್ನ ಯಜಮಾನರದು. (ಲತಾ ಸುಮ್ಮನಾಗಿ ಒಳಗೆ ಹೋಗುವಳು.)

**ಹರಿ:-** ಆದರೂ ಅಮ್ಮ, ಸರಕಾರಿ ನೌಕರಿ ಬಿಟ್ಟ ಮ್ಯಾಲ ಸ್ವಲ್ಪ ಸುಧಾರಿಸ್ಯಾನ ಬಿಡು. ಇಲ್ಲದೆ ಇದ್ದರೆ ನಿತ್ಯಾ ಕಚೇರಿಯೊಳಗ ಜಗಳ ಅಂದರ ಜಗಳ. ಅದರ ಸೇಡು ಮನಿಯೊಳಗ ತೀರಸತಿದ್ದ.

**ಯಶೋ:-** ಏನು ಸುಧಾರಿಸ್ಯಾನೋ ಏನೋ. ನನಗ ತಿಳೀದು ಅವನ ಸಿಡುಕು ಸೆಡವಿನಿಂದ ವ್ಯಾಪರದೊಳಗ ನಿನಗ ಎಷ್ಟು ಅಡಚಣಿ ಆಗತದೋ ಏನೋ. ಏನು ಮಾಡೋದು. ನೀನೆ ಸಂಬಾಳಿಸಕೋ ಬೇಕು.

**ಹರಿ:-** ಈಗ ನಾನೊಂದು ಉಪಾಯ ಮಾಡೀನಲ್ಲ (ಊಟಮಾಡುತ್ತ ಮಾತಾಡುತ್ತಿರುವನು.)

**ಯಶೊ:-** ಏನದು ?

**ಹರಿ:-** ಅಂವಾ ಹೀಗೇನಾದರೂ ತಪ್ಪು ಮಾಡಿದಾ ಅಂದರ ನಾನೇ ಗಿರಾಕಿಗಳನ್ನ ಸಂಭಾಳಿಸಿಕೊಂಡು ಬಿಡತೀನಿ. ಆ ಮೇಲೆ ಅವನಿಗೆ ತಿಳಿಸಿ ಹೇಳತೀನಿ.

**ಯಶೊ:-** ನಿನಗ ಎಷ್ಟು ತ್ರಾಸ ಆಗತದ ನೋಡು.

**ಹರಿ:-** ಸ್ವಲ್ಪ ಆಗತದ. ಇನ್ನೂ ಒಂದು ಮಾಡೀನಲ್ಲ.?

**ಯಶೊ:-** ಏನು ?

**ಹರಿ:-** ನಿತ್ಯ ಏನೇನು ಮಹತ್ವದ ಘಟನಾಗಳು ಆಗತಾವ ಡೈರಿಯೊಳಗ ಬರದಿಡು ಅಂದೀನಿ. ನಾನು ಬರೀತೀನಿ. ಇಬ್ಬರೂ ಕೂಡಿಯೇ ಪ್ರತಿ ಭಾನುವಾರ ವಿಚಾರ ಮಾಡತೀವಿ. ಇದು ಅವನಿಗೆ ಬಹಳ ಮನಸಿಗೆ ಬಂದsದ

**ಯಶೊ:-** ಏನೋ ಅಪ್ಪ. ಅವನ ಮನಸ್ಸು ತಿಳೀದು. ಮನೀಯೊಳಗ ಮಾತ್ರ ನಮ್ಮ ಸಂಗಡ ಈವ ಹುಲಿ ಇದ್ದ ಹಾಂಗ ಇರತಾನ. ನಾಕು ಮಾತು ಬಿಚ್ಚಿ ಆಡೇವೆಂದರ ನನಗ ಸುದ್ದಾ ಧೈರ್ಯ ಆಗೋದಿಲ್ಲಾ. ಅದಂತೂ ಹುಡುಗಿ. ಅಂವಾ ಏನ ಬಿ. ಏ. ಪಾಸಾದರೂ ಅಷ್ಟೇ ಅವ.

**ಹರಿ:-** ಬಿ ಏ. ಏನು ಮಾಡೀತವ್ವಾ. ವ್ಯವಹಾರಜ್ಞಾನ ಬರೋ ದಾರೀನೆ ಬ್ಯಾರೇ ಅದ. (ಕೈ ತೊಳೆದು ತೇಗುವನು. ಏಳುವನು)

**ಯಶೊ:-** ಲತಾ ಅಡಿಕಿ ತಂದು ಕೊಡು.

**ಲತಾ:-** (ಅಡಿಕಿ ತಂದಿಟ್ಟು) ಭಾವಜಿ, ಇವೊತ್ತು ತುಪ್ಪ ಮತ್ತು ರೇಷನ್ ಸಾಮಾನು ತರಸಬೇಕು.

**ಹರಿ:-** ಹೌದವ್ವಾ ನೆನಪು ಮಾಡಿದ್ದು ನೆಟ್ಟಗ ಮಾಡಿದೆ. ಕಳಿಸಿ ಕೊಡತೀನಿ. (ಕೋಟು ಟೊಪ್ಪಿಗೆ ಹಾಕಿಕೊಳ್ಳುತ್ತ) ಅವ್ವಾ, ಗುರು ಬಂದಾ ಅಂದರ, ಊಟಾ ಆದವ್ಯಾಲ ಸ್ವಲ್ಪ ವಿಶ್ರಾಂತಿ ತಗೊಂಡು, ಅಂಗಡೀ ಕಡೇ ಬಾ ಅಂತ ಹೇಳು.

**ಯಶೊ:-** ಒಳ್ಳೇದು. (ಹೋಗುವಳು) ಲತಾ ನೀನು ಊಟಾ ಮಾಡಿ ಬಿಡು. ಎಷ್ಟು ಹೊತ್ತು ಏನೋ ಅಂವಾ ಬರೋದು.

**ಲತಾ:-** ಬರಲಿ. ಊಟಕ್ಕ ಕೊಡೋದು, ಅವರು ಬರೋದು ಆಗ ತದ. ಅವರು ಬಂದಾಗ ನಾ ಕೂತಿದ್ದರ ಅದೇನು ಸರಿಆಗೋದಿಲ್ಲ. ಅವರ ಮನಸಿಗೂ ಬರೋದಿಲ್ಲ. ನಿಮಗೇನ ಗೊತ್ತಿಲ್ಲ ?

**ಯಶೊ:-** ಅವನ ಬಿಂಕಾ ಏನ ಕೇಳತೀದಿ. ನಾ ಇರತೇನಲ್ಲ. ಎಷ್ಟು ಹೊತ್ತು ಉಪವಾಸ ಕೂಡತೀದಿ. ಉಣ್ಣು.

**ಲತಾ**:- ಬ್ಯಾಡ. ಈಗ ಬಂದಾರು. ಈ ಪುಸ್ತಕ ಅರ್ಧ ಓದಿಬಿಟ್ಟೇನಿ ಅನಕಾ ಓದತೀನಿ. ಅಷ್ಟು ಹೊತ್ತಿಗೆ ಬರತಾರ.
**ಯಶೋ**:- ಹಾಗಾದರ? ನಾನು ನೆರಮನಿ ನಿರ್ಮಲಾಬಾಯಿ ಮನೀಗೆ ಹೋಗಿಬರತೀನಿ ನಾಲ್ಕು ದಿವಸದಿಂದ ಆಕೀ ವ್ಯೆಯ್ಯಾಗ ನೆಟ್ಟಗಿಲ್ಲಂತ, ಮಾತಾಡಿಸಿ ಬರತೀನಿ.

**ಲತಾ**: ಹೋಗಿ ಬರ್ರಿ (ಯಶೋದಾಬಾಯಿ ಹೋಗುವಳು.)

(ತುಸು ಹೊತ್ತಿನ ತರುವಾಯ)

(ಲತಾ ಓದುವದರಲ್ಲಿ ಮಗ್ನಳಾಗಿದ್ದಾಳೆ. ಗುರುದಾಸ ಬಂದುದರ ಅರಿವಿಲ್ಲ.)

**ಗುರು**:- ಅಮ್ಮಾ!...ಅಮ್ಮಾ.......(ಜೋರಾಗಿ) ಅಮ್ಮಾ!

**ಲತಾ**:- (ಬೆಚ್ಚ ಬಿದ್ದು) ಆಂ! ಹಾಂ! ಅವರು, ಅತ್ತೆಮ್ಮ ನಿರ್ಮಲಾಬಾಯಿಯ ಮನಿಗ........

**ಗುರು**:- ಹೂಂ!.... ನೀವು ಓದೋದರೊಳಗ ತಲ್ಲೀನರಾಗಿರ್ರಿ! ಮನೀಗೆ ಯಾರ ಬಂದರೇನು? ಹೋದರೇನು? ಕೇಳೋರೆ ಇಲ್ಲಾ.

**ಲತಾ**:- (ಅಂಜುತ್ತ) ಇಲ್ಲಾ ಮತ್ತಿದ್ದರ ಯಾರೂ ಇದ್ದಿಲ್ಲ. ಅದಕ್ಕ ಪುಸ್ತಕಾ........ಕೈಕಾಲು ತೊಳೀರಿ. ಊಟಕ್ಕ ಹಾಕತೀನಿ.

**ಗುರು**:- ಇದೇ ಬಿಸಲಾಗಿಂದ ಬಂದೀನಿ. ಆಗಲೇ ಷುರು. 'ಏಳರಿ' ಅಂತ. ಇಲ್ಲೆ ನೋಡಿದರ ಕೂಡಲಿಕ್ಕೆ ಸುದ್ದಾ ಒಲ್ಲೆ ಅನಸ್ತದ. ಎಷ್ಟು ರಂಧಿ? ಇವತ್ತು ಕಸಾನೂ ಬಳದಿಲ್ಲ ಕಾಣಸತದ.

**ಲತಾ**:- ಬಳದದ ಮುಂಜಾನೆ.

**ಗರು**:- ಇರಲಿ ಹೋಗು. ತಿರಗಿ ತಿರಗಿ ಯಾಕ ಉತ್ತರಾ ಕೊಟಗೋತ ನಿಂತಿ? ಇದು ಕಸಾ ಬಳದ ಲಕ್ಷಣ ಕಾಣಸತದ. (ಅಂಗಿ ಬಿಚ್ಚಿ ನಿಲ್ಲುವನು) ಯಾಕ ನಿಂತಿ ಕಂಬ ನಿಂತಹಾಂಗ. ಈರಣ್ಣನ ಮುಂದ ಬೀರಣ್ಣ ನಿಂತ ಹಾಂಗ. ದೇವರು ಬುದ್ಧಿ ಹಂಚೋ ಮುಂದ ಗೈರ ಹಾಜರ್ ಇದ್ದೀ ಅಂತ ಕಾಣಸತದ. ಧೋತರ!

**ಲತಾ**:- ಅಯ್ಯ, ತರತೀನಿ ಅಂದರ. ಒಳಗ ಅದ. ಅಯ್ಯ. ಇಲ್ಲ. ಇಲ್ಲೇ ನಿಮ್ಮ ಅಲಮಾರಿದಾಗ ಅದ.

**ಗುರು**:- ರಾಮಾ ರಾಮಾ. ಹೆಂಡತಿ ಜೀವ ಹಿಂಡತಿ.

**ಲತಾ**:- ಇಕಾ ತಗೊಳ್ಳರಿ ಧೋತರ.

**ಗುರು**:- ಇದು ನಂದ ಅಲ್ಲಾ. ಅಣ್ಣಾಂದ ಅದ.

**ಲತಾ:-** ಹೌದು ಅದೆನ್ನೇ ಉಟಗೊಳ್ರಿ.

**ಗುರು:-** ಯಾಕ? ನಂದೇನಾತ್ಯು? ಒಂದಾದರೂ ವ್ಯವಸ್ಥಿತ ಇದ್ದರ ದೇವರ ಆಣೆ ತಗೊಳ್ಳರಿ.

**ಲತಾ:-** ಅದನ್ನೇ ಉಟಗೊಳ್ರಿ. ನಿಮ್ಮದು ಅವರು ಉಟಗೊಂಡು ಹೋದಹಾಂಗ ಅದ.

**ಗುರು:-** ಓಹೋ (ಅಣಕಿಸಿ)'ಹೋದ ಹಾಂಗ ಅದ'ನಿಮ್ಮ ಊಹಾ ಪೋಹಗಳು.

**ಲತಾ:-** ಹೊತ್ತಾಗೇದ. ಹಸದೀರಿ. ತೀವ್ರ ನಡೀರಿ ಊಟಕ್ಕ.

**ಗುರು:-** ಸಾಕು ನಿನ್ನ ಉಪಚಾರಾ. ಒಂದಿಷ್ಟು ಥ್ರೋತರಾ ಸರಿಯಾಗಿ ಇಡೋದು ಆಗೋದಿಲ್ಲಾ. ಒಂದು ವ್ಯವಸ್ಥಾ ಇಲ್ಲಾ. ಈ ಮೇಜ ನೋಡರಿ ಎಷ್ಟು ಗಜಿಬಜಿ. ಈ ಕೋಣಿ ನೋಡರಿ ಎಷ್ಟು ರಂಧಿ. ನನ್ನವೈ ಅಂಗಿ ತಾ ಇನ್ನೊಂದು.

**ಲತಾ:-** ಕೊಡತೀನಿ.

**ಗುರು:-** ಸಾಕು ಸಾಕಿನ್ನು ಸಂಸಾರ ಸುಖವು. ದೇವಾ. ಅಲ್ಲೆ ಆ ಖುರ್ಷಿದಲಾಲ್ ಗೋಳಾಡಿಸಿದ. ಇಲ್ಲೋ ಈಕೀ....

**ಲತಾ:-** ಇಗೋ ವೈ ಅಂಗಿ.

**ಗುರು:-** ನಮ್ಮ ಅದೃಷ್ಟಕ್ಕ ಯಾರೇನು ಮಾಡತಾರ. ಈ ವೈ ಅಂಗೀಗೆ ಅಗಸರಾಂವಾ ಎಷ್ಟು ಕಪ್ಪು ಕಲೆ ಹಚ್ಚಿ ಬಿಟ್ಟಾನ. ಇವತ್ತಿನ ದಿನಾನೇ ನೆಟ್ಟಗಿದ್ಹಂಗಿಲ್ಲ.

**ಲತಾ:-** ಯಾಕ? ಹೋದ ಕೆಲಸ ಏನಾತು? ಭಾವಜೀನು ಅಂತಿದ್ದರು.

**ಗುರು:-** ಮುಂಜಾನೆ ಎದ್ದು, ನಿನ್ನ ಮಾರೀ ನೋಡೀನಿ ಇವತ್ತ. ಅದ ಹ್ಯಾಂಗ ಕೆಲಸ ಆಗತಾವ?

**ಲತಾ:-** ಇಲ್ಲೆ ಕೃಷ್ಣನ ಪಟ, ರಾಮದೇವರ ಪಟ ಇರತಾವ ನೋಡತ ಬರ್ರಿ.

**ಗುರು:-** ಉಶ್ಯ ಅಪಾ. ಆ ಹಾ ಹಾ ಹಾ!

**ಲತಾ:-** ಯಾಕ ಕೂತೇ ಬಿಟ್ಟಿರಲ್ಲ. ಹಸಿವಿ ಇಲ್ಲೇನು. ಎಲ್ಲಾ್ಯರ ಹೋಟಲ್ಲನ್ಯಾಗ.

**ಗುರು:-** ಯಾಕ ಚೌಕಸಿ ಭಾಳ ನಡದ್ಹದ? ಬಿಸಿಲಾಗ ಉಪವಾಸ ಮಾರಿ ಒಣಗಿಸಿಕೊಂಡು, ಮಂದಿ ಕಡಿಂದ ಅನಿಸಿಕೊಂಡು ತಿರಗಿದರ ತಿಳೀತದ. "ಹೊಟಲ್ಲನ್ಯಾಗ ತಿನಬೇಕೋ" ಬಿಡಬೇಕೋ ಅಂಬೋದು.

**ಲತಾ:-** ಹಾಂಗಾದರ ಕೂತಿರ್ರಿ. ಪಾನಕಾ ಮಾಡಿಕೊಂಡು ಬರ ತೀನಿ. ಅನಕಾ ರೇಡಿಯೋ ಕೇಳ್ರಿ. ಹಚ್ಚತೀನಿ. (ರೇಡಿಯೋ ಹಚ್ಚಿ ಒಳಗೆ ಹೋಗುವಳು.)

**ರೇಡಿಯೋ:-** 'ಇಂದಿನ ಮಹಿಳಾ ಗೋಷ್ಠಿಯಲ್ಲಿ ಶ್ರೀಮತಿ ಲಲಿತಾಬಾಯಿ ಅವರು 'ಮನೆಯ ಸಾಮರಸ್ಯ' ಎಂಬ ವಿಷಯದ ಮೇಲೆ ಮಾತಾಡುವರು. ಲಲಿತಾಬಾಯಿ: "ಮನೆಯ ಸಾಮರಸ್ಯ ಅಂದರೆ ಮನೆಯಲ್ಲಿರುವವರೆಲ್ಲರ ಸೌಹಾರ್ದವಾದ ಸಂಬಂಧ. ಇದಕ್ಕೆ ಪರಸ್ಪರ ಸಹಾನುಭೂತಿ, ಪ್ರೇಮ ಇವೇ ಮೂಲಭೂತ. ಮನೆಯ ಹೊಣೆ ಹೊತ್ತಿರುವ ಯಜಮಾನರ ಮೇಲೆ ಹೆಚ್ಚಿನ ಜವಾಬುದಾರಿಇದೆ. ಮನೆಯಎಲ್ಲಜನರ ಆಹಾರ, ಬಟ್ಟೆಬರೆ ಮನೆಯ ಸ್ವಚ್ಛತೆಯ ಕಡೆಗೆ ವಿಶೇಷ ಲಕ್ಷ್ಯಕೊಡಬೇಕಾಗುತ್ತದೆ. ಯಾರಿಗೆ ಯಾವಾಗ ಯಾವುದು ಎಷ್ಟು ಬೇಕು? ಅದನ್ನು ಹೇಗೆ ಒದಗಿಸಿಕೊಂಡಿರಬೇಕು ಎಂಬುದನ್ನ ತಿಳಿದಿರಬೇಕು. ಚಿಕ್ಕ ಮಕ್ಕಳ ಆರೈಕೆ, ಶುಶ್ರೂಷೆಯಲ್ಲಂತೂ ತುಸುವೂ ಅಜಾಗರೂಕತೆಯು ಸಲ್ಲದು. ಮನೆಯ ಹೊಣೆಯಲ್ಲಿ ಸಹಭಾಗಿಗಳಾದ ಹಿರಿಯ ಗಂಡುಮಕ್ಕಳ ಮನೋವೃತ್ತಿಯನ್ನು ಅರಿತಿರಬೇಕು. ಅವರ ವಿಚಾರ ಸರಣಿಯನ್ನು ತಿಳಿದಿರಬೇಕು. ಒಟ್ಟು ಕುಟುಂಬದ ಹಿತದ ದೃಷ್ಟಿಯಿಂದ ಅವರ ವಿಚಾರಗಳನ್ನು ಅನೇಕ ಸಲ ಪರಿವರ್ತಿಸಬೇಕಾದ ಹೊಣೆಯೂ ಇವರ ಮೇಲೆಯೇ ಇರುತ್ತದೆ. ಇದರಲ್ಲಿ ಅನೇಕ ಸಲ ತಪ್ಪುವುದುಂಟು. ಕಲಹವೂ ಬೆಳೆಯುತ್ತವೆ. ಎದೆಗುಂದಬಾರದು. ಪರಿಸ್ಥಿತಿಯನ್ನು ವಿವೇಚಿಸಿಕೊಂಡು ಮುಂದೆ ತಿದ್ದಿಕೊಳ್ಳಲು ಹವಣಿಸಬೇಕು. ವಿಕಾರವಶರಾಗಬಾರದು. ಹೊರಗೆ ತಮ್ಮ ವೃತ್ತಿಯಲ್ಲಿ ಸಮಾಜದಲ್ಲಿ ಆಗುವ ನೋವುಗಳ ಪರಿಣಾಮ ಮನೆಯಲ್ಲಿ ಹೊರಹೊಮ್ಮದೇ ಇರದು. ಇದನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕು. ಕಹಿ ಪ್ರಸಂಗ ಬಂದಾಗ ಸಹನೆಯಿಂದ ಇರಬೇಕು. ಮಹಾಪೂರ ಇಳಿದ ಮೇಲೆ ಮನಸ್ಸುಪ್ರಸನ್ನವಾದಾಗ ತಿದ್ದಬೇಕು."

**ಗುರು:-** [ಸ್ವಗತ] ಎಲ್ಲಾ ಹೆಣ್ಣುಮಕ್ಕಳು ಹೀಂಗ ಆದರ ನಮ್ಮ ಹಣೇಬಾರಾ ಹೀಂಗ ಯಾಕ ಆಗತಿತ್ತು.

**ರೇಡಿಯೋ:-** ಇಲ್ಲಿ ನಾನು ಸಂಕ್ಷೇಪವಾಗಿಹೇಳುತ್ತಿದ್ದೇನೆ. ಇನ್ನು ಮನೆಯಲ್ಲಿ ಗಂಡಸಿನ ಹೊಣೆಯು ಅಷ್ಟೇ ಮಹತ್ವದ್ದು. ಗಂಡು ಹೆಣ್ಣು ಸಂಸಾರಕ್ಕೆ ಹೂಡಿದ ಜೋಡು ಕುದುರೆ. ಇಬ್ಬರೂ ಕುದುರೆಯಂತೆ ಚುರುಕಾಗಿರಬೇಕು. ಇದರಲ್ಲಿ ಒಂದು ಬಳಗಾಹಾಕಿದರೂ ತೀರಿತು. ರಥ ಸಾಗದು. ಗಂಡು ಸ್ವಭಾವತಃ ಸಾಮಾನ್ಯವಾಗಿ ಬಿರುಸು ಒರಟು. ನಮ್ಮ ದೇಶದಲ್ಲಿ ಸಾಮಾನ್ಯವಾಗಿ ಆರ್ಥಿಕ ಹೊಣೆಯಲ್ಲ ಗಂಡಿನ ಮೇಲೆ. ಅನೇಕರು ಈ ) ಶೆ ಯನ್ನು ಸರಿಯಾಗಿ ನಡೆಸುವದಿಲ್ಲ. ಅಷ್ಟೇ ಅಲ್ಲ ಅಡ್ಡದಾರಿಗೆ ಎಳೆ

ಯುತ್ತಾರೆ. ಅದರಲ್ಲಿ ಸುಶಿಕ್ಷಿತರೆಂದೆನಿಸುವವರು ಕೂಡ ಸಂಸಾರ ರಥಕ್ಕೆ ಹೆಗಲು ಕೊಟ್ಟಾಗ, ರಥಕ್ಕೆ ಹೂಡಿದ ಜೋಡಿಯು ಕುದುರೆಯಂತೆ ವರ್ತಿಸದೆ ಕುದುರೆಯ ತಮ್ಮ (ಕತ್ತೆ) ಯಂತೆ ವರ್ತಿಸುತ್ತಾರೆ. ಹೀಗಾಗಿ....

**ಗುರು:**– ಥೂ ತೇರಿ. ಇದು ಭಾಷಣ ಮಾಡೋ ಲಕ್ಷಣನ? ಸಾಕು ಬಾಯಿ ಮುಚ್ಚು (ರೇಡಿಯೋ ಮುಚ್ಚಿ ಬಿಡುವನು)

**ಲತಾ:**– ಇದು ಪಾನಕಾ. ಇದು ನೀರು.

**ಗುರು:**– (ನೀರಿನಿಂದ ಬಾಯಿ ಮುಕ್ಕಳಿಸಿ. ಪಾನಕಾ ಬಾಯಿಗೆ ಹಚ್ಚಿ) ಥೂ ನಿನ ಹಾಳಾಗ. ನೀ ಎಲ್ಲಿಂದ ಗಂಟು ಬಿದ್ದೀದಿ? (ಪಾನಕದ ವಾಟಿಗವನ್ನು ಬೀಸಿ ಒಗೆಯುವನು. ಬರುತ್ತಿರುವ ಯಶೋಧಾಬಾಯಿಯ ಕಾಲಿಗೆ ತಗಲುವುದು.)

**ಯಶೋ:**– ಅಯ್ಯ ಏನಿದು ಕಾಲಿಗೆ ಬಡೀತು.

**ಲತಾ:**– }
**ಗುರು:**- } ಅರೇರೆ!

**ಯಶೋ:**- ಯಾರದು? ಗುರು ಏನು? ಯಾಕ ಸಿಟ್ಟು ಮಾಡತೀಯಾ? ಆಂ ಆಂ ಕಾಲು ಬ್ಯಾನಿ ಆತು ನೋಡು. ಯಾಕಮ್ಮ ಲತಾ ಏನು ಸುದ್ದಿ?

**ಲತಾ:**- (ಕಣ್ಣೀರು ಸುರಿಸುತ್ತ) ನನ್ನ ದೈವ (ಒಳಗೆ ಹೋಗುವಳು)

**ಗುರು:**– ಬಾರಮ್ಮ. ನಿನ್ನ ಕಾಲಿಗೆ ಪೆಟ್ಟು ಬಹಾಳ ಹತ್ತೈದ. ಕೂಡು. ಬಾ ಮೊದಲು (ಕರೆದುಕೊಂಡು ಬರುವನು).

**ಯಶೋ:**– (ಕುರ್ಚಿಯ ಮೇಲೆ ಕುಳಿತು) ಯಾಕ ಗುರೂಜಿ? ಏನ ಸುದ್ದಿ ಅಣ್ಣಾ. ಹಸದು ಬಂದೀದಿ ಬಿಸಲಾಗ. ಏಳು ನಾನೇ ಹಾಕತೀನಿ ಊಟಕ್ಕ.

**ಗುರು:**– (ಬರುತ್ತಿರುವ ಸಿಟ್ಟು, ದುಃಖವನ್ನು ನುಂಗಿ) ಕೂಡಮ್ಮ. ನಿನಗ ಕಾಲಿಗೆ ಬ್ಯಾನಿ ಆಗೇದ. ಕುಂಟತೀದಿ.

**ಯಶೋ:**– ಅದೆಷ್ಟರ ಬ್ಯಾನಿ. ಹೋತ್ಯ ನಡಿ.

**ಗುರು:**- ನಡೀತೀನಮ್ಮ ತುಸು ತಡಿ.

**ಯಶೋ:**– ಆಗಲಿ. ಲತಾ ತಾಟು ಬಡಿಸಿಡಮ್ಮ. ನಾನು ಈಗ ಬರತೀನಿ.

**ಗುರು:**- ಅಮ್ಮಾ ಈಕಿಗೆ ಬುದ್ಧಿ ಎಂದು ಬರಬೇಕು? ನಾನು ಏನಾದರೂ ಅಂದರ ನೀವೂ ನನಗ ಅಂತೀರಿ.

**ಯಶೋ**:- ಸಣ್ಣಕಿದ್ದಾಳ. ಇನ್ನೂ ತಿಳವಳಿಕಿ ಇಲ್ಲ. ಸಂಬಾಳಿಸಿ ಕೋಬೇಕಪ್ಪ. ಹೆಣ್ಮಕ್ಕಳು ಹುಟ್ಟಿದ ಮನಿ ಬಿಟ್ಟು ಪರಮನೀಗೆ ಬಂದಿರ ತಾರ. ನೋಡು ಒಂದೊಪ್ಪತ್ತಿಗೆ ಅವರು ತಪ್ಪಿದರೂ ಕೂಡಾ ನಾವೇ ಸುಧಾರಿಸಕೋಬೇಕು. ಹತ್ತ ಹುತ್ತ ಅಂದರ ಮತ್ತಿಷ್ಟು ಹೌಹಾರಿ ಅಡ ವೀಗ ಬೀಳತಾವ. ಆಗ ನಮಗs ಕಷ್ಟ ಅಲ್ಲ.

**ಗುರು**:- ನೀನು ಹೇಳೋದು ಸರಿ ಅಂತ ಕಾಣಸತದ ಖರೇ. ಆದರ ಸಂಬಾಳಿಸಿಕೊಳ್ಳೋರಿಗೂ ಒಂದು ಮಿತಿ ಬ್ಯಾಡ? ಅಮ್ಮಾ ಪಾನಕಕ್ಕ ಯಾರಾದರೂ ಉಪ್ಪು ಹಾಕಿ ಮಾಡತಾರ.

**ಲತಾ**:- (ದುಃಖದಿಂದ) ನಂದು ತಪ್ಪಾಗೇದ. ಸಕ್ಕರಿ ಶೀಸೆ ಉಪ್ಪಿನ ಶೀಸೆ ಒತ್ತಟ್ಟಿಗೆ ಇದ್ದವು. ಎರಡೂ ಬಿಳೀ ಬಣ್ಣ. ಎರಡೂ ಇಟ್ಟಾವ. ಅದಕ ಅದೂ........ (ಬಿಕ್ಕುವಳು)

**ಯಶೋ**:- ಕೋಡೋದಕ್ಕ ಮುಂಚೆ ಸ್ವಲ್ಪ ಬಾಯೊಳಗಾದರೂ ಹಾಕ್ಕೊಂಡು ನೋಡಬೇಕಮ್ಮ. ಆಗಲಿ ಹೋಗು ಸಕ್ರಿ ಹಾಕಿ ಮಾಡಿ ಕೊಂಡು ಬಾ.

**ಲತಾ**:- (ಮೆಲ್ಲಗೆ) ಅತ್ತೆಮ್ಮಾ.... ಇದ್ದದ್ದೊಂದು ಅರ್ಧ ಹೋಳು ನಿಂಬಿಹಣ್ಣು ಅದಕ್ಕೆ ಹಾಕಿ ಬಿಟ್ಟೆ.

**ಗುರು**:- ಇವೊತ್ತಿನ ದಿನಾನೇ ಹೀಂಗದ ನನ್ನ ಪಾಲಿಗೆ.

**ಯಶೋ**:- ಇರಲಿ ನಡಿ. ಯಾವ ದಿನಾ ಏನ ಮಾಡತದ. ನಿತ್ಯ ಒಂದೇ ರೀತಿ ಎಲ್ಲಿ ಇರತದ? ಏನ ಆ ಪಾನಕದಿಂದ ಹೊಟ್ಟೀನ ತುಂಬೋ ದಿಲ್ಲಾ ನಡಿ. ಊಟಕ್ಕೆ ಹಾಕತೀನಿ.

**ಗುರು**:- ಖರೇ ಕೇಳಿದರ ನನಗೀಗ ಉಣ್ಣೊ ಮನಸೂ ಇಲ್ಲ. ಹಸಿ ವೀನೂ ಇಲ್ಲ. ಹೋಟಲ್ಲನ್ಯಾಗೂ ತಿಂದೀನಿ. ಈಗ ಅಂಗಡೀಗೆ ಹೋಗ ತೀನಿ. ಕೆಲಸ ಆದ. ಸಂಜಿಗೇ ಉಣತೀನಿ. ಈಗ ಜುಲ್ಮಿ ಮಾಡಬ್ಯಾಡ. (ಬಟ್ಟೆ ಹಾಕಿಕೊಂಡು ಹೊರಟೇಬಿಡುವನು.)

**ಯಶೋ**:- ಗುರು ಹೊರಟೇಬಿಟ್ಟೇನೊ? ನಿನ್ನ ಮನಸ್ಸು ಅಪ್ಪ

**ಗುರು**:- ಹೌದಮ್ಮ ಸಂಜಿಗೆ ಬರತೀನಿ. (ಹೋಗುವನು)

**ಯಶೋ**:- (ಸ್ವಗತ) ಪಾಪ! ಲತಾ ಉಪವಾಸ ಕೂತದ.

೩

(ಮೂರನೆಯ ದಿನ ಭಾನುವಾರ. ಹರಿದಾಸ, ಗುರುದಾಸ ತಮ್ಮ ಮನೆಯಲ್ಲಿ ಕುಳಿತಿದ್ದಾರೆ: ಬೆಳಗ್ಗೆ ೮ ಗಂಟೆಯ ಸಮಯ. ಗುರುದಾಸ ಡೈರಿನೋಡುತ್ತಿದ್ದಾನೆ.)

**ಹರಿ:-** ಏನು ಗುರು, ಪೂರ್ಣ ನೋಡಿದ್ಯಾ ನನ್ನ ಡೈರಿ, ಹೋದ ವಾರದ್ದು ?

**ಗುರು:-** ಹಾಂ! ನೋಡತಾ ಇದ್ದೀನಿ. ಇನ್ನೂ ಸ್ವಲ್ಪ ಅದ. ಅಣ್ಣ ನಂದು ನೀ ನೋಡಿದೆಲ್ಲ? ಎಲ್ಲಾ ಕೆಂಪು ಗೆರೀನೆ ಅವ. ಸುಧಾರಣಾ ಕಾಣಸಲೊಲ್ಲದು.

**ಹರಿ:-** ಕ್ರಮೇಣ ಬರತದ. ಹಿಂದಿನ ತಿಂಗಳ ಇದೇ ಮಿತಿ ಡೈರಿ ನೋಡು ಸುಧಾರಣೆ ಅದೆ. ಹೋದ ವಾರದಲ್ಲಿ, ಯುವಜನ ಸಂಘದೊಳಗೆ ನಿನ್ನನ್ನು ಕಟುವಾಗಿ ಟೀಕಿಸಿದಾಗ, ನೀನು ತೋರಿದ ತಾಳ್ಮೆ ಸ್ಮರಣೀಯ ವಾಗಿದೆ. ನಿನ್ನ ಆ ತಾಳ್ಮೆಯಿಂದ ಟೀಕಿಸಿದವರ ಗೌರವವೇ ಕಡಮೆಯಾ ಯಿತು. ನಿನ್ನನ್ನು ಪುನಃ ಸಹಕಾರ್ಯದರ್ಶಿಯನ್ನಾಗಿ ಆರಿಸಿಕೊಂಡರು. ನೀನು ಡೈರಿಯಲ್ಲಿ ಈ ಘಟನೆಯ ಬಗ್ಗೆ, ಇದು ತಾಳ್ಮೆಯ ಫಲ ಎಂದು ಬರೆ ದದ್ದು ಯಥಾರ್ಥವಾಗಿದೆ.

**ಗುರು:-** ಆದರೂ ಒಂದು ಹೆಜ್ಜೆ ಮುಂದೆ ಇಟ್ಟರೆ, ನಾಕು ಹೆಜ್ಜೆ ಹಿಮ್ಮೆಟ್ಟಿದ ಹಾಗೆ ಇದೆ. ಅಣ್ಣಾ, ನಾನು ಖುರ್ಷೀದಲಾಲರಿಂದ ಆರ್ಡರ್ ತರಲು ಅಸಮರ್ಥನಾದರೂ, ನೀನು ಸಾಯಂಕಾಲವೇ ಹೋಗಿ ಆರ್ಡರ ತಂದೆಯಲ್ಲ. ಈ ಚಾತುರ್ಯ ನನಗೆ ಎಂದು ಬರಬೇಕು?

**ಹರಿ:-** ಆ ತೃಷೆ ಇದ್ದರೆ ಸಾಕು ಬಂದೇ ಬರತದ.

**ಗುರು:-** ನಾನು ನಿಜವಾಗಿಯ ಖುರ್ಷಿದಲಾಲರೊಡನೆ ಒರ ಟಾಗಿ ವರ್ತಿಸಲಿಲ್ಲ. ಆದರೂ........

**ಹರಿ:-** ನೀನು ಡೈರಿಯಲ್ಲಿ ಬರದೀಯಲ್ಲ, ಅವರಿಗೆ ತಮ್ಮ ಕೆಲ ಸದ ಒತ್ತಾಯ ಇರೋ ಕಾಲಕ್ಕೆ ನಿನ್ನ ಸಂಗತಿ ಹೇಳಲು ಆತುರಪಟ್ಟೆಯಲ್ಲ! ಅದು ವಿಚಾರ ಮಾಡತಕ್ಕ ವಿಷಯ. ಯಾರೊಡನೆ ನಮಗೆ ಸಂಬಂಧ ಬರ ತದೋ ಅವರ ಮನೋವೃತ್ತಿ, ಅವರ ಆಶೆ ಆಕಾಂಕ್ಷೆಗಳನ್ನರಿಯದೇ, ನಮ್ಮ ದನ್ನು ಮುಂದು ಮಾಡಿದಾಗ ಹೀಗ ಆಗತದ.

**ಗುರು:-** ಹೌದು ಅನಸತದ. ಆದರ ಈ ಅಧಿಕಾರಿಗಳು ಜನರನ್ನ ಹೀಗ ಕಾಯಿಸೋದು........

**ಹರಿ:-** ಅಧಿಕಾರಿ ಆದವನೂ ಮನುಷ್ಯ. ನಮ್ಮಂತೆ ಅವನಿಗೂ ಹೃದಯ ಇರತದೆ. ಅನುಕೂಲ ಅನಾನುಕೂಲ, ಇರುತವೆ. ಅವನಿಗೂ ಅಭಿ ಮಾನ, ಸುಖ ಸಂತೋಷ ಇರುತ್ತವೆ. ಅವನ್ನ ಗಮನಿಸದಿದ್ದರೆ?

**ಗುರು:-** ಈ ಮಾತು ಅವರಿಗೂ ಇರಬಾರದೇನು ?

**ಹರಿ:-** ಎಷ್ಟೋ ಸಲ ನೀನು ತಿಳಕೊಂಡಿದ್ದೀಯಾ ಇದನ್ನ. ಪ್ರತಿಯೊಬ್ಬನೂ ತನ್ನನ್ನು ಸುಧಾರಿಸಿಕೊಳ್ಳಲು ಪ್ರಯತ್ನ ಮಾಡಬೇಕು. ಇತರರು ಹಾಗಿರಬೇಕು, ಹೀಗಿರಬೇಕು ಅಂತಾ ವಿಚಾರಿಸುತ್ತಾ ಹೋದರೆ, ಕೇವಲ ಅದರ ಚಿಂತೆಯೇ ಆಗಿ, ನಮ್ಮ ಹಿತಚಿಂತನೆಯು ಮರೆತು ಹೋಗುತ್ತದೆ. ಅಲ್ಲವೆ ?

**ಗುರು:-** ಹೌದು. ಏನು ಮಾಡೋದು ಅಣ್ಣಾ. ಈಗ ವಿಚಾರ ಮಾಡೋ ಮುಂದ ಎಲ್ಲಾ ಸರಿ ಅನಸತದ. ಪ್ರಸಂಗ ಬಂದಾಗ ಆಚರಣಿ ಬರೋದಿಲ್ಲಾಗೇದ.

**ಹರಿ:-** ಬರತದ, ಸಹನೆ ಇರಬೇಕು. ಶ್ರದ್ಧೆ ಇರಬೇಕು. ಸತತ ಪ್ರಯತ್ನದಿಂದ ಇಂದಿಲ್ಲ ನಾಳೆ ಬರತದ.

**ಗುರು:-** ಹೌದಣ್ಣ ಕೇವಲ ತಿಳಕೊಂಡರ ಸಾಲದು ಬಿಡು. ಈ ಮೂರು ತಿಂಗಳಿಂದಾನೂ ನಾವೀ ಡೈರಿ ಬರೆದು ವಿಚಾರ ನಡೆಸತೇವಲ್ಲ. ಆದರೆ ಎಲ್ಲಿಯವರೆಗೆ ಆಚರಣೆಯೊಳಗ ಬರೋದಿಲ್ಲ ಅಲ್ಲಿ ತನಕ ಏನೂ ಉಪಯೋಗ ಇಲ್ಲ.

**ಹರಿ:-** ಹೌದು ಆಚರಣೇನೆ ನಮ್ಮ ಉದ್ದೇಶ. ವಿಚಾರವು ಆಚಾರಕ್ಕೆ ಪ್ರಚೋದಕವಾಗಿರಬೇಕು. ಜನತೆಯೊಡನೆ ವರ್ತಿಸುವಾಗ, ಈ ಪ್ರಪಂಚದೊಳಗ ಈ ಉತ್ತಮ ವಿಚಾರಗಳಂತೆ ಆಚರಿಸುವ ಒಂದು ಹದ ಏನು ಬರತದಲ್ಲ, ಅದಕ್ಕ ವ್ಯವಹಾರಜ್ಞಾನ ಅನ್ನೋದು. ಅದು ಬರಬೇಕು.

**ಗುರು:-** ಆದರ ಇತ್ತೀಚಿಗೆ ವ್ಯವಹಾರ ಜ್ಞಾನ ಅಂದರ ಮಂದೀಗೆ ಟೊಪ್ಪಿಗೆ ಹಾಕಲಿಕ್ಕೆ ಬರೋದು ಅಂತ ಅರ್ಥ ಮಾಡತಾರ.

**ಹರಿ:-** ಹಾಂ! ಸಿನೀಮಾದೊಳಗ ತೋರಸೋ ಪ್ರೇಮದ ಹಾಂಗ. ನೀನು, ಪೂರಾ ನನ್ನ ಡೈರಿ ನೋಡಿಲ್ಲೇನು?

**ಗುರು:-** (ಡೈರಿ ನೋಡುತ್ತ) ಹೌದು. ಅರೇ ಇದೇನು? ಅಣ್ಣಾ!

**ಹರಿ:-** ಯಾಕ ತಡೆದಲ್ಲ! ಬರದದ್ದು ತಿಳೀವಲ್ಲದೇನು ?

**ಗುರು:-** ತಿಳದದ. ನಿನ್ನ ಮೆಟ್ಟಲಿಗೆ ಬರಬೇಕಾದರ ನನಗ ಎಷ್ಟು ಜನ್ಮ ಬೇಕೋ!

**ಹರಿ:-** ನಿನಗ ಹಾಂಗ ಅನಸತದ. ನಮಕಿಂತ ಮಂದಿ ಎಷ್ಟೋ ಪಟ್ಟು ಮೇಲಿನ ಮೆಟ್ಟಲನೊಳಗ ಇದ್ದಾರ.

**ಗುರು:-** ಅಮ್ಮಾ! ಅಮ್ಮಾ!

**ಲತಾ:-** (ಪ್ರವೇಶಿಸಿ) ಅವರು ಇಲ್ಲ. ಈಗ ಬರತಾರ.

**ಗುರುಃ**– ನಿನ್ನೆ ಮಧ್ಯಾಹ್ನ ವಿಷ ಸೌತೆಕಾಯಿ ಪಲ್ಯ ಆಗಿತ್ತ?

**ಲತಾಃ**- ಭಾವಜಿ !

**ಹರಿಃ**- ಹೌದಮ್ಮ, ನೀನೂ ಊಟಾ ಮಾಡಿಲ್ಲ. ಅವನೂ ಮಾಡಿಲ್ಲ. ನಿಮಗೇನು ಗೊತ್ತು ಏನೋ ಅವಸರದೊಳಗ ವಿಷ, ಸೀ ನೋಡಿರಲಿಕ್ಕಿಲ್ಲ.

**ಲತಾಃ**- (ಗದ್ಗದಿತಳಾಗಿ) ಭಾವಜಿ, ನಾ ಜುಲುಮಿ ಮಾಡಿ ಇನ್ನಷ್ಟು ಇನ್ನಷ್ಟು ಹಾಕಿದೆನಲ್ಲ. ನೀವು ತಿಂದುಬಿಟ್ಟರಿ ವಿಷ.

**ಹರಿಃ**- ನೀನು ಚಿಕ್ಕವಳಮ್ಮ. ನಿಮ್ಮ ಅಕ್ಕನೂ ಹೀಗೇ ಮಾಡತಾಳ. ಇರಲಿ ಹೋಗು. ನಿನಗೆ ಕೆಲಸ ಅದs ಏನೋ ಒಳಗ. [ಹೋಗುವಳು]

**ಗುರುಃ**– ಇದ್ದ ಸಂಗತಿಯನ್ನು ಮುಚ್ಚಿಡೋದು ಅಷ್ಟು ಸರಿಯೆ?

**ಹರಿಃ**- ಸತ್ಯವನ್ನು ಹೇಳಬೇಕು, ಸರಿಯೆ! ಹಾಗೆ ಹೇಳಬೇಕಾದಾಗ ಉದ್ದೇಶ ಏನು ಅಂಬೋದನ್ನ ವಿಚಾರಿಸು. ಹಾಗೆ ಹೇಳುವದರಿಂದ ತಪ್ಪು ಮಾಡಿದವರ ತಪ್ಪನ್ನು ಎತ್ತಿ ತೋರಿಸಿದಂತಾಗಿ ಅವರ ಅಭಿಮಾನ ಕೆರಳತದ. ಅದರಿಂದ ಒಳ್ಳೆ ಪರಿಣಾಮ ಆಗೋದಿಲ್ಲಾ. ಅದು ಬೇರೆ ರೀತಿಯಿಂದ ತಿಳಿದಾಗ ಆಗುವ ಪರಿಣಾಮ ಹೆಚ್ಚು ಒಳ್ಳೆಯದಾಗಿರುತ್ತದೆ. ಇದು ನನ್ನ ಅನುಭವ. ನಿನ್ನೇನನ್ನ ಹೊರತು ಯಾರಿಗೂ ತಿನ್ನುವ ಪ್ರಸಂಗಾನೂ ಬರಲಿಲ್ಲ. ನಾನು ಹೇಳದೇ ಇದ್ದುದರಿಂದ ಯಾರಿಗೂ ಅಸಮಾಧಾನವೂ ಆಗಲಿಲ್ಲ. ನಾನೊಬ್ಬನೆ ಸಹನೆ ಮಾಡಿದುದರ ಫಲ.

**ಗುರು**:- ಆದರೂ ತಪ್ಪು ತಿದ್ದಿ ಹೇಳುವ ಹೊಣೆ ಇದ್ದವರು ವ್ಯಕ್ತಗೊಳಿಸದೇ ಇರೋದು....

**ಹರಿಃ**- ಗುರು ಇದು ನೋಡು. ಪಾನಕಕ್ಕೆ ಉಪ್ಪು ಹಾಕಿದುದನ್ನು ವ್ಯಕ್ತಪಡಿಸಿದ ನಿನ್ನ ರೀತಿಯಿಂದ ಆದ ಪರಿಣಾಮವನ್ನು ನೀನೆ ಬರೆದಿರುವೆಯಲ್ಲ, ಡೈರಿಯಲ್ಲಿ, ಅಮ್ಮನ ಕಾಲಿಗೆ ಪೆಟ್ಟು ತಾಕಿತು ಅಂತ, ಆದರೆ ಕಾಲಿಗೆ ತಗಲಿದ ಪೆಟ್ಟಿಗಿಂತ ಅಮ್ಮನ ಮನಸ್ಸಿಗೆ, ಅದರಲ್ಲೂ ಲತಾನ ಎಳೆಕ ಮನಸ್ಸಿಗೆ ತಟ್ಟಿದ ಪೆಟ್ಟನ್ನು ನೀನು ಕಂಡಿಲ್ಲ, ಗುರು. ಅದನ್ನು ಕಾಣುವ ಕಣ್ಣು ಬರಬೇಕು. ಖಿನ್ನನಾಗಬೇಡ. [ಯಶೋಧಾಬಾಯಿ ಬರುವಳು. ಹರಿದಾಸನು ನೋಡಿಲ್ಲ. ಗುರುದಾಸನು ನೋಡಿ]

**ಗುರುಃ**- ಅವ್ಮಾ!

**ಹರಿಃ**- ಈಗ ಅವ್ಮಾ ಅಂದರೆ ಹೇಗೆ? ಸಾತಿಕಾಯಿ ವಿಷ ಅರಗಿಸಿ ಕೊಳ್ಳಬಹುದು, ಗುರು. ಆದರ ಒರಟ ಮಾತಿನ, ಒರಟು ವರ್ತನೆಯ ವಿಷ ಅರಗೋದಿಲ್ಲ. ಸದಾ ನೋವು ಮಾಡತದ. ಆಡಿದವರಿಗೂ, ಆಡಿಸಿಕೊಂಡ ವರಿಗೂ ಇಬ್ಬರಿಗೂ ಇದರ ವಿಷಾ ಏರತದ.

**ಗುರು**:- ಅ.... [ದುಃಖಿತನಾಗಿ] ಅಣ್ಣಾ.

**ಹರಿಃ**- ನೀನು ದುಃಖಿಸಬೇಕೆಂದು ನನ್ನ ಅಭಿಪ್ರಾಯವಲ್ಲ. ನಿನ್ನಲ್ಲಿ ವ್ಯವಹಾರದ ನಿಜವಾದ ಜ್ಞಾನ ಬರಲಿ ಅನ್ನೋದೆ ನನ ಉದ್ದೇಶ.. ನಿನ್ನೆ ಲತಾ ಉಪವಾಸ ಬಿದ್ದಳು, ಭಾರವಾದ ಮನಸ್ಸನ್ನು ಹೊತ್ತುಕೊಂಡು. ಇದಕ್ಕೆ ಹೊಣೆ ಒರಟು ವರ್ತನೆಯಲ್ಲವೆ?

**ಗುರುಃ**- [ಹರಿಯ ತೆಕ್ಕೆಗೆ ಬಿದ್ದು] ಅಣ್ಣಾ ಲಜ್ಜಿತನಾಗೀನಿ. ನಿನ್ನೆ ನನ್ನಿಂದ ಇಂಥ ಅಸಭ್ಯ ವರ್ತನಿ.... [ಗದ್ಗದಿತನಾಗುವನು]

**ಯಶೋಃ**- ಹರಿ, ಹರಿ. ಗುರು ಇಷ್ಟು ಕರಗತಾನ ಅನಿಸಿರಲಿಲ್ಲ.

**ಹರಿಃ**- ಅವ್ಮಾ ನೀನು ಯಾವಾಗ ಬಂದಿ?

**ಯಶೋಃ**- ಆಗಲೇ ಬಂದೆ.

**ಗುರುಃ**- ಅವ್ಮಾ, ನಾನು.... ನಾನು ಹ್ಯಾಂಗ ಸುಧಾರಿಸೇನು?

**ಯಶೋಃ**- ರಾಮನಂಥ ಅಣ್ಣನಿರೋ ಮುಂದ ಯಾಕ ಕಾಳಜಿ ಮಾಡತಿ? ಲತಾ ನೀನು ಯಾಕ ಕಣ್ಣೀರ ಹಾಕತೀಯಮ್ಮಾ, ತಾ ಕಾಫಿ ತಂದುಕೊಡು ಕುಡೀಲಿ.

**ಹರಿಃ**- ಅವ್ಮಾ ಸಣ್ಣವರನ್ನ ಹೊಗಳಿದರ ಆಯುಷ್ಯ ಕ್ಷೀಣ ಆಗ ತದಮ್ಮಾ. ನಿನ್ನ ಮಕ್ಕಳಲ್ಲ ನಾವು? ಕೀರ್ತಿ, ಅಪಕೀರ್ತಿ ನಿಂದು.

**ಯಶೋಃ**- ಹರಿ! ನಿಮಗ ದೇವರು ದೊಡ್ಡ ಆಯುಷ್ಯ ಹಾಕಲಿ. ನೀವು ವ್ಯವಹಾರ ಜ್ಞಾನ ಸಂಪಾದಿಸಿ ಸುಖದಿಂದ ಇರಲೆಂದೇ ನನ್ನ ಹರಕೆ.



# ಜಡ ಭರತ

## -: ಮುನ್ನುಡಿ:-

ಸ್ಥೂಲಕಾಯನಾಗಿದ್ದು ಚಟುವಟಿಕೆ ಇಲ್ಲದ ಮನುಷ್ಯನಿಗೆ 'ಜಡಭರತ'ನ ಹಾಗೆ ಇದ್ದಾನೆ ಎಂದು ಉಪಮೆ ಕೊಡುವುದು ರೂಢಿಯಲ್ಲಿದೆ. ಈ ಉಪಮಾನಕ್ಕೆ ವಸ್ತುವಾದ 'ಜಡಭರತ'ನ ಚರಿತೆಯು ಶ್ರೀ ಮದ್ಭಾಗವತದಲ್ಲಿ ಪ್ರಸಿದ್ಧವಾಗಿದೆ. ಆತ ಮಹಾಜ್ಞಾನಿ. ಆ—ಭರತ ಮಹಾರಾಜ—ಹತ್ತು ಸಾವಿರ ವರ್ಷ ಧರ್ಮದಿಂದ ರಾಜ್ಯವಾಳಿದ. ಲೋಕ ಸೇವೆ ಮಾಡಿ ಆತ್ಮೋದ್ಧಾರ ಮಾಡಿಕೊಂಡ. ಆತ್ಮ ಶಕ್ತಿಯನ್ನು ಬೆಳೆಯಿಸಿ ಜಡಮಯ ವಾದ ಪ್ರಕೃತಿ ಬಂಧನದಿಂದ ಮುಕ್ತನಾಗಲು ದಾರಿ ಮಾಡಿಕೊಂಡ. ಆದರೂ ಆತನು 'ಜಡ ಭರತ'ನೆಂದು ಹೆಸರು ವಾಸಿಯಾದುದು ಸ್ವಾರಸ್ಯವಾಗಿದೆ. ಈ ಮಹಾ ಆತ್ಮವು ಜಡ ದಿಂದ ಮುಕ್ತಿ ಪಡೆದ ಕೊನೆಯ ಜನ್ಮದ ವೃತ್ತಾಂತವು ಬಹು ವಿಚಿತ್ರವೂ, ರಮಣೀಯವೂ ಆಗಿದೆ. ಸ್ಥೂಲಕಾಯನಾಗಿ, ಜಡನಂತೆ ವ್ಯವಹರಿಸಿದ ಆ ಮಹಾಜ್ಞಾನಿಯ ದಿವ್ಯ ಚರಿತೆಯನ್ನು ಈ ಚಿಕ್ಕ ರೂಪಕದಲ್ಲಿ, ಸಂಕ್ಷೇಪವಾಗಿ ರೂಪಿಸಲು ಪ್ರಯತ್ನಿಸಲಾಗಿದೆ.

## —: ಪಾತ್ರಗಳು :—

**ಕುಮಾರಾ:— 'ಜಡಭರತ'ನ ಕೊನೆಯ ಜನ್ಮದ ಹೆಸರು**

**ಸುಮತಿ:— ಆತನ ಮಲತಾಯಿ**

**ಸುದರ್ಶನ:— ಆತನ ಮಲಅಣ್ಣ**

**ರಾಜಾರಹೂಗಣ:- ಸೌವೀರ ರಾಷ್ಟ್ರದ ರಾಜಾ**

[ಕಾಳಿಕಾದೇವಿ ಪೂಜಾರಿ, ಪಲ್ಲಕ್ಕಿ ಹೊರುವ ಮುಖ್ಯವಾಹಕ ಚೋರರಾಜ ಮುಂತಾದವರು.]

೧

ಬೀದಿಯಲ್ಲಿ ಹುಡುಗರ ಗಲಭೆ:— "ಏ ಹುಚ್ಚಾ! ಏ! ಏ ಹುಚ್ಚಾ! ಇಲ್ಲಿ ನೋಡು. ಇಲ್ಲಿ ನೋಡು. ಹೋ ಹೋ ಹೋ! ಹೇ ಹೇ ಹೇ! ಹೇಗೆ ಕುಳಿತಿದೆ ನೋಡಿ. ಬಾ ಬಾ ಬಾ."

ಸುಮತಿ:- [ಬಾಗಿಲು ತೆಗೆದು ಹೊರಗೆ ನೋಡಿ] ಯಾಕೆ ಮಕ್ಕಳೆ? ಸುಮ್ಮನಿರಲಾಗುವುದಿಲ್ಲವೆ? ನಮ್ಮ ಕುಮಾರನನ್ನೇಕೆ ಗೇಲಿ ಮಾಡುತ್ತೀರಿ? ಎಷ್ಟು ಸಲ ಬೇಡಿಕೊಂಡರೂ ನೀವು ಬಿಡಲೊಲ್ಲಿರಿ.

[ಹುಡುಗರು:- 'ಹೇ ಹೇ ಹೇ ಹುಚ್ಚಾ ಹುಚ್ಚಾ' ಎನ್ನುತ್ತ ಓಡಿ ಹೋಗುವರು.]

ಕುಮಾರಾ! ಕುಮಾರಾ!........ಅಯ್ಯೋ! ಮಾತೇ ಆಡದ ಈತನನ್ನು ಮಾತಾಡಿಸುತ್ತಿದ್ದೇನೆ. ಎಂತಹ ಹುಡುಗನಾದನಲ್ಲ ಈತ? ಮಾತಿಲ್ಲ. ಸುಖದ ಅರಿವಿಲ್ಲ! ದುಃಖದ ಪರಿವೆ ಇಲ್ಲ! ಹಸಿವೆಂದು ತಿನ್ನಲು ಕೇಳುವುದಿಲ್ಲ! ದೇವಾ! ಈತನ ಭವಿತವ್ಯವೆಂತೋ? ಏನಾಗುವುದೊ? ಯಾರನ್ನು ಕೇಳಲಿ? ತಂದೆಯನ್ನು ಕಳೆದುಕೊಂಡ. ಹೆತ್ತತಾಯಿ ಸಹ-ಗಮನ ಮಾಡಿದಳು. ಅವರಿಬ್ಬರೂ ಪುಣ್ಯವಂತರು. ನನ್ನ ಪಾಲಿಗೆ ಈತನ ದುಃಖ ನೋಡುವುದು ಬಂದಿದೆ.

ಸುದರ್ಶನ:- (ಪ್ರವೇಶಿಸಿ) ಯಾರ ದುಃಖವಮ್ಮಾ? ಯಾಕೆ? ಸುಮ್ಮನಾದೆಯಲ್ಲ? ಹೀಗೇಕೆ ನಿಂತಿರುವಿ? ಓಹೋ! ಕುಮಾರನ ಬಗ್ಗೆ ಯೋಚಿಸುತ್ತಿರುವಿಯೇನು? ಆದರೆ ನೋಡು ಅವನಿಗೆ ದುಃಖವೆಲ್ಲಿದೆ? ದುಃಖ ಪಡುವವರು ನಾವು. ಅವನೋ ನೆಮ್ಮದಿಯಾಗಿದ್ದಾನೆ. ಯಾವ ಕೆಲಸವನ್ನೂ ಮಾಡುವುದಿಲ್ಲ. ಚಿಂತೆಯಂತೂ ಮೊದಲೇ ಇಲ್ಲ. ಯೋಧನ ಹಾಗೆ ಸ್ಥೂಲಕಾಯನಾಗಿದ್ದರೂ ಅವನಿಂದ ಯಾರಿಗೂ ಪ್ರಯೋಜನವಿಲ್ಲ. ಸ್ವಂತಕ್ಕೂ ಕೂಡ ಪ್ರಯೋಜನವಿಲ್ಲ. ಕಳೆದ ಹದಿನಾರು ವರ್ಷದಿಂದ ಅವನನ್ನು ಸುಧಾರಿಸಲು ತಂದೆಯವರು ಪ್ರಯತ್ನಿಸಿ ಪ್ರಯತ್ನಿಸಿ ಕೊನೆಗೆ ಅದೇ ಕೊರಗಿನಿಂದಲೇ ಇಹಲೋಕ ಯಾತ್ರೆಯನ್ನು ಮುಗಿಸಿದರು. ಅಮ್ಮಾ ಹೆತ್ತತಾಯಿಗೇ ಇಷ್ಟು ಕಾಳಜಿ ಇರಲಿಲ್ಲ. ನೀನು ಮಲತಾಯಿ. ಇಷ್ಟೇಕೆ ಕೊರಗುತ್ತೀಯಮ್ಮಾ?

ಸುಮತಿ:- ಸುದರ್ಶನಾ! ನಿನಗಿಂಥ ಮಾತು ಶೋಭಿಸವು ಮಗು. ಈ ಭೇದಭಾವ ತಂದುಕೊಳ್ಳಬೇಡ. ವತ್ಸಾ, ನಿನ್ನಂಥ ವಿವೇಕಿಗೆ ಸಲ್ಲದ ಮಾತು ಇವು. ನಿನ್ನಂತೆಯೇ ಅವನೂ ನನಗೆ ಪುತ್ರ. ಹಿರಿಯರು ಇರುವ ವರೆಗೆ ನನಗಾಗಲೀ ತಂಗಿಗಾಗಲೀ ಹೆಚ್ಚಿನ ಹೊಣೆ ಇರಲಿಲ್ಲ. ಈಗ ಆ ಎಲ್ಲ ಹೊಣೆಯೂ ನನ್ನ ಮೇಲೆ ಬಿದ್ದಿದೆ. ಅದಕ್ಕಾಗಿ ಕೊರಗು.

ಸುದರ್ಶನ:- ತಾಯಿ! ನನ್ನ ಅವಿವೇಕತನದ ಮಾತಿಗಾಗಿ ಕ್ಷಮಿಸು. ನನ್ನ ಅರ್ಥ ಹಾಗಿರಲಿಲ್ಲ. ನೀನು ವ್ಯರ್ಥ ದುಃಖಿಸಬಾರದೆಂಬುದೇ ನನ್ನ ಅಭಿಪ್ರಾಯ. ಆತನ ಅದೃಷ್ಟದಲ್ಲಿ ಇದ್ದಂತೆ ಆಗುತ್ತದೆ. ಆತನ ಪ್ರಗತಿಗಾಗಿ ನಾವು ಮಾಡದೇ ಇದ್ದ ಪ್ರಯತ್ನವೇ ಉಳಿದಿಲ್ಲ. ಎಲ್ಲರಂತೆ ಆತನೂ ವಿದ್ಯಾಭ್ಯಾಸ ಮಾಡಲಿ; ಜಗತ್ತಿನ ಜನರಂತೆ ವ್ಯವಹರಿಸಲಿ ಎಂದು ನಾವೆಲ್ಲರೂ ಬಯಸುತ್ತಿಲ್ಲವೆ? ಆದರೆ ಪರಮಾತ್ಮನ ಸಂಕಲ್ಪವೆಂತಿದೆಯೋ? ಯಾರು ಬಲ್ಲರು? ಕುಮಾರನ ಜಡಮಯ ಜೀವನದಲ್ಲಿ ಎಂದಿಗೆ ಚಲನೆ ಉತ್ಪನ್ನವಾಗುವುದೋ?

ಸುಮತಿ:- ೧೬ ವರ್ಷದವನಾದ. ಮಾತೇ ಇಲ್ಲವಲ್ಲಯ್ಯ. ಕಿವುಡನಲ್ಲ. ಆದರೆ ಮಾತಿಲ್ಲ. ಬಹು ವಿಚಿತ್ರ. ಕೊನೆಗೆ ಚಟುವಟಿಕೆಯೂ ಇಲ್ಲ.

ಸುದರ್ಶನ:- ತನ್ನಷ್ಟಕ್ಕೆ ತಾನೇ ಮಾತು ಆಗಾಗ ಆಡಿಕೊಳ್ಳುತ್ತಾನೆಂದು ಕೆಲವರು ನೋಡಿದವರು ಹೇಳಿದ್ದಾರೆ. ನಾನು ಮಾತ್ರ ನೋಡಿಲ್ಲ.

[ಬೀದಿಯಲ್ಲಿ ಮತ್ತೆ ಹುಡುಗರ ಗಲಭೆ. 'ಹುಚ್ಚಾ ಹುಚ್ಚಾ, ಹುಚ್ಚಾ! 'ಹುಚ್ಚಾ ಹುಚ್ಚಾ ಹುಚ್ಚಾ' ಎಂದು ಕೈ ತಾಳ ಹಾಕುತ್ತ ಹೇಳುವರು.]

ಸುದರ್ಶನ:- (ಹೊರಗೆ ಮುಖ ಮಾಡಿ) ಮಕ್ಕಳೇ! ನಡೆಯಿರಿ ಇಲ್ಲಿಂದ. ಗಲಭೆ ಮಾಡಬೇಡಿ. [ಹುಡುಗರು ಓಡಿ ಹೋಗುವರು.] ಕುಮಾರಾ! ಕುಮಾರಾ! ಏಳು. ಒಳಗೆ ಬಾರಯ್ಯ. ಏಳು ಮಹಾರಾಯಾ! ತಲೆ ಅಲ್ಲಾಡಿಸುವಿಯಲ್ಲ! ಏನು? ಒಳಗೆ ಬರುವುದಿಲ್ಲವೆ?

ಸುಮತಿ:- ಕೂಡಲಿ ಬಿಡು ಸುದರ್ಶನಾ! ಆತನಿಗೇ ಮರ್ಯಾದೆ, ಅಭಿಮಾನ ಇಲ್ಲದಿರುವಾಗ ನಾವೇಕೆ ಹಚ್ಚಿಕೊಳ್ಳಬೇಕು?

ಸುದರ್ಶನ:- ಅದು ಸರಿಯಮ್ಮ. ನನಗೆ ಅದರ ಕಾಳಜಿ ಇಲ್ಲ. ಏನಾದರು ಇಷ್ಟು ಕೆಲಸ ಮಾಡಲು ಏನು? ಸ್ವಸ್ಥಾಗಿ ಕುಳಿತಲ್ಲಿಯೇ ಕುಳಿತು ಬಿಡುತ್ತಾನಲ್ಲ.

ಸುಮತಿ:- ಹಿಡಿದು ಮಾಡಿಸಿದರೆ ಮಾಡುತ್ತಾನೆ ಕೆಲಸ. ಮೊನ್ನೆ ನೆರೆಯುವರು ಅಗಿಯುವ ಕೆಲಸ ಹಚ್ಚಿದ್ದರಂತೆ. ನಿನ್ನ ತಮ್ಮ ಗಿಡ ಕಡಿಯಲು ಹಚ್ಚಿದ್ದನಂತೆ. ಮಾಡುತ್ತಾನೆ. ಆದರೇನು? ಯಾವ ಕೆಲಸದಲ್ಲಿಯೂ ಉತ್ಸಾಹವಿಲ್ಲ ಅವನಿಗೆ. ಈಗ ಒಂದು ವಾರದ ಹಿಂದೆ ಯಾರೋ ದೂರದ ಊರಿಗೆ ಕರೆದೊಯ್ದು ಮದುವೆಯಲ್ಲಿ ನೀರು ಹೊರಿಸಿದರಂತೆ. ಊಟಕ್ಕೆ ಹಾಕಲಿಲ್ಲವಂತೆ. ಹಾಗೇ ಉಪವಾಸವಿದ್ದ. ನಮ್ಮೂರಿನಿಂದ ಹೋದವರು ನೋಡಿ, ಊಟಕ್ಕೆಹಾಕಿಸಿ ಬರುವಾಗ ಸಂಗಡ ಕರೆದುತಂದರು.

ಸುದರ್ಶನ:- ಹೀಗಿದೆ ಇವನ ಅವಸ್ಥೆ! ಆತನ ದಾರಿ ಆತನಿಗೆ. ಸುಮ್ಮನೆ ಕೊರಗುವುದರಲ್ಲಿ ಅರ್ಥವಿಲ್ಲ. ಆಗಲಿ. ನನಗೆ ಕೆಲಸವಿದೆ. ಹೋಗುತ್ತೇನೆ. [ಹೊರಗೆ ನೋಡಿ] ಅಮ್ಮಾ. ಕುಮಾರ ಹೋಗಿ ಬಿಟ್ಟಿದ್ದಾನೆ.

ಸುಮತಿ:- ಹೋಗಲಿ. ದಾರಿಯಲ್ಲಿ ಕಂಡರೆ ಮನೆಗೆ ಕರೆದು ಕೊಂಡು ಬಾ.

ಸುದರ್ಶನ:- ಆಗಲಿ. ನೀನು ಮಾತ್ರ ಕೊರಗಬೇಡ ತಾಯಿ. ಒಳ್ಳೇದು. ನಾನು ಹೋಗಿ ಬರುತ್ತೇನೆ.

೨

[ಕೆಲ ದಿನಗಳ ತರುವಾಯ ಒಂದು ರಾತ್ರಿ ಕಾಳಿಕಾ ದೇವಿ ಮಂದಿರದಲ್ಲಿ ಕಾಳಿಕಾ ದೇವಿಯ ಪೂಜೆ ನಡೆದಿದೆ. ಆರತಿ ಮುಗಿದನಂತರ ಸುಮಾರು ಒಂದು ಅರ್ಧತಾಸಿನ ವರೆಗೆ ಕಾಳಿಕಾ ಸೂಕ್ತವನ್ನು ಪೂಜಾರಿಯು ಸ್ವರಪೂರ್ವಕವಾಗಿ ಪಠಿಸುತ್ತಾನೆ. ಸೂಕ್ತವನ್ನು ಹೇಳಿ ಮುಗಿಸಿದ ನಂತರ–]

ಪೂಜಾರಿ:- ಹ್ರೀಂ! ಹ್ರೂಂ ಹ್ರಾಂ! ಹಾ ಹೂ ಹೂ ಹಾ ಹಾ! ಕಾಳಿಕಾಯನಮಃ! ಓಂ. ಹಾಂ! ಬನ್ನಿರಿ ರಾಜಾಧಿರಾಜರೆ! ನೀವು ನಿಮ್ಮ ಜೀವನದ ಹಂಗುದೊರೆದು ಜನರ ಮೇಲೆ ದಾಳಿ ಮಾಡಿ ಶೂರತನ

ದಿಂದ ಧನ ಸಂಚಯ ಮಾಡಿ ನಿಮ್ಮ ಪರಿವಾರಕ್ಕೆಲ್ಲ ದಾನ ಮಾಡುವ ನಿಮ್ಮ ಔದಾರ್ಯಕ್ಕೆ ದೇವಿಯು ಮೆಚ್ಚಬೇಕಾದರೆ, ಆಕೆಯ ಆರಾಧನೆ ನಡೆಯಿಸಿ, ಆಕೆಯ ಅಡಿದಾವರೆಗಳಲ್ಲಿ ನರಬಲಿಯನ್ನು ಅರ್ಪಿಸುವ ಮಹಾ ಕಾರ್ಯವನ್ನು ಮಾಡುವುದು ನಿಮ್ಮ ಕರ್ತವ್ಯವೆಂದು ತಿಳಿದಿರುವ ವಿವೇಕ ಶಾಲಿಗಳು ನೀವು. ದೇವಿಯ ಪವಿತ್ರತಮವಾದ ಪಾಣಿಯಲ್ಲಿರುವ ಈ ನಿಶಿತವಾದ ಶಸ್ತ್ರವನ್ನು ಹಿಡಿಯುವ ಭಾಗ್ಯವನ್ನು ನೀವು ತಂದು ಕೊಂಡಿರುವುದು ನಿಮ್ಮ ಉದ್ಧಾರಕ್ಕಾಗಿಯೇ. ನೀವು ಇಂದು ತಾಯಿಯ ಅಡಿದಾವರೆಗಳಲ್ಲಿ ಮುಡುಪಿಡಲು ತಂದಿರುವ ಈ ನರ-ಪಶವು ಕೂಡ ನಿಮ್ಮ ದೇವೀಭಕ್ತಿಯನ್ನು ವ್ಯಕ್ತಗೊಳಿಸುತ್ತದೆ. ಅದೆಷ್ಟು ಸಶಕ್ತನಾಗಿದ್ದಾನೆ ಈತ. ನೀವು ಶಾಸ್ತ್ರೋಕ್ತವಾಗಿ ಆತನಿಗೆ ಮಾಡಿದ ಅಲಂಕಾರ ಆಹುತಿಗೆ ಯೋಗ್ಯನನ್ನಾಗಿಸಿದೆ. ಇದೋ ಮಧ್ಯರಾತ್ರಿಯು ಗತಿಸುತ್ತಿದೆ. ದೇವಿಯು ನಿಮಗೆ ಆಜ್ಞೆ ಮಾಡಿದ್ದಾಳೆ. ಹಿಡಿಯಿರಿ ಈ ಶಸ್ತ್ರವನ್ನು. ಛೇದಿಸಿರಿ ಇವನ ರುಂಡವನ್ನು. ಒಂದೇ ಏಟಿಗೆ ಅದು ಧಡದಿಂದ ಉರುಳಬೇಕು. ದೇವಿಯ ಚರಣ ಕಮಲವನ್ನು ಸಾಂಗಗೊಳಿಸಿರಿ. ಬಲಿಯು ಅರ್ಪಣವಾಗಿ ದೇವಿಯ ಪ್ರಸಾದ ಹಸುಗೆಯಾಗುವವರೆಗೆ ತಾವು ಮೌನ ಮತ್ತು ಧ್ಯಾನವನ್ನು ಬಿಡಕೂಡದು ಹೂಂ! ಜಯಕಾಳಿ.

(ಸುಮತಿ-ಸುದರ್ಶನರ ಪ್ರವೇಶ)

ಸುಮತಿ:- ನಿಲ್ಲಿರಿ. ತಡೆಯಿರಿ. ಪೂಜಾರಿಗಳೇ! ನನಗೆ ಪುತ್ರ ದಾನ ನೀಡಿರಿ. [ರಾಜನು ತಡೆಯುವನು]

ಪೂಜಾರಿ:- ಯಾರದು? ಒಳಗೆ ಹೇಗೆ ಬಂದಿರಿ? ಯಾರ ಅಪ್ಪಣೆಯಿಂದ ಪ್ರವೇಶಿಸಿದಿರಿ?

ಸುದರ್ಶನ:- ಕಾಳಿಕಾ ಮಂದಿರದಲ್ಲಿ ಅಪ್ಪಣೆ ಬೇಕೆ? ಮಹಾದ್ವಾರವನ್ನು ನೀವು ಭದ್ರವಾಗಿ ಹಾಕಿಕೊಂಡರೆ ನಮಗೆ ದೇವಿಯು ಪ್ರವೇಶ ಕೊಡಲಾರಳೆ? ಇದು ನೋಡಿ. ನೀವು ಬಲಿ ಕೊಡುತ್ತಿರುವ ಈ ಯುವಕ ನನ್ನ ತಮ್ಮ. ದಯವಿಟ್ಟು ಆತನನ್ನು ಬಿಡಿರಿ.

ಸುಮತಿ:- ಹೌದು, ಗುರುಗಳೇ, ನನ್ನ ಪುತ್ರನನ್ನು ಕೊಲೆ ಮಾಡಿಸಬೇಡಿ. ಜೀವದಾನ ಕೊಡಿ.

ಪೂಜಾರಿ:- ಎಲೌ ಸ್ತ್ರೀಯೆ! ನಿನ್ನ ಪುತ್ರ ಧನ್ಯನಿದ್ದಾನೆ. ಕಾಳಿಕಾ ತಾಯಿಯ ಅಡಿದಾವರೆಗಳಲ್ಲಿ ಅರ್ಪಿತವಾಗುವಂಥ ಪುಣ್ಯ ಎಲ್ಲರಿಗೂ ಬರಲಾರದು. ಆ ಸೌಭಾಗ್ಯ ನಿನ್ನ ಪುತ್ರನಿಗೆ ಬಂದಿದೆ. ನೀನು ಸಂತೋಷಿಸಬೇಕು.

ಸುದರ್ಶನ:—ಆದರೆ ಆ ಸೌಭಾಗ್ಯವನ್ನು ಗುರುಗಳಾದ ನೀವೇ ಪಡೆದುಕೊಂಡಿದ್ದರೆ ಎಷ್ಟು ಚೆನ್ನಾಗುತ್ತಿತ್ತು?

ಪೂಜಾರಿ:—ಪಾಷಂಡಿಯೇ! ದೇವಿಯ ಎದುರಿನಲ್ಲಿ ನಿಂತಿರುವಿ. ಹೀಗೆ ದ್ರೋಹದ ನುಡಿಯನ್ನು ನಾಲಗೆಗೆ ತರಬೇಡ. ತೊಲಗು ಇಲ್ಲಿಂದ.

ಸುದರ್ಶನ:—ದ್ರೋಹಿ ನಾನಲ್ಲ. ನರಬಲಿಯ ದುಷ್ಕೃತ್ಯವನ್ನು ನಡೆಸುವ ನೀವು ದ್ರೋಹಿಗಳು.

ಪೂಜಾರಿ:—ನಮ್ಮ ಈ ಪಶುವಧೆಯ ಪವಿತ್ರ ತಮವಾದ ಕಾರ್ಯದಲ್ಲಿ ವಿಘ್ನ ತಂದರೆ ನಿನಗೆ ದುರ್ಗತಿಯಾದೀತು. ಎಚ್ಚರಿಕೆ!

ಸುಮತಿ:—ಗುರುಗಳೆ! ನಾವು ವಿಘ್ನ ಮಾಡಲು ಬಂದವರಲ್ಲ. ಭಿಕ್ಷೆ ಬೇಡಲು ಬಂದಿದ್ದೇವೆ. ಲೋಕಮಾತೆಯಾದ ಕಾಳಿಕಾದೇವಿಯಲ್ಲಿ ಬಿಕ್ಷೆ ಬೇಡುತ್ತೇನೆ. ತಾಯೆ, ನನ್ನ ಈ ಪುತ್ರ ದಡ್ಡನು ನಿಜ. ಆದರೆ ಅವನು ನಡೆಸುತ್ತಿರುವ ಜೀವನ ತೀರ ವಿಚಿತ್ರದ್ದಾಗಿದೆ. ಆತನ ಒಂದೊಂದು ಚರಿತೆಯು ನನಗೆ ಆಶ್ಚರ್ಯಕರದ್ದಾಗಿದೆ. ಪರದೇಶಿಯಾದ ಈ ನನ್ನ ಮಗುವನ್ನು ಹೀಗೆ ವಧೆ ಮಾಡಿಸಲಾರೆ ತಾಯೆ. ನೀನಾದರೂ ಇದನ್ನು ಹೇಗೆ ಸಹಿಸುವಿ? ಹೌದು. ದೇವಿಯು ಜೀವ ಹತ್ಯವನ್ನೆಂದಿಗೂ ಸಹಿಸಲಾರಳು! ಬಿಡಿರಿ ನನ್ನ ಕುಮಾರನನ್ನು.

ಪೂಜಾರಿ:—ಸಾಕುಮಾಡು ನಿನ್ನ ಪ್ರಲಾಪವನ್ನು. ಭಟರೆ ಇವರನ್ನು ಈ ಸ್ತಂಭಕ್ಕೆ ಬಂಧಿಸಿರಿ.

[ಭಟರು ಸುಮತಿ ಸುದರ್ಶನರನ್ನು ಬಂಧಿಸುವರು]

ಸುಮತಿ:—(ಬಂಧನದಲ್ಲಿದ್ದುಕೊಂಡು) ಅಯ್ಯೋ ಕುಮಾರಾ! ನಿನ್ನನ್ನು ಅದೆಷ್ಟು ಸಿಂಗರಿಸಿದ್ದಾರಲ್ಲ! ನಿನ್ನ ಈ ಯೌವ್ವನದ ರೂಪು! ಈ ಸಿಂಗಾರ! ಅಯ್ಯೋ ಮದುವಣಿಗನ ಸಿಂಗಾರದ ಬದಲು ನಿನಗೆ ಈ

ಸಿಂಗಾರವಾಯಿತೇ? ಅಯ್ಯೋ! ನಿನ್ನನ್ನು ಮರಣಕ್ಕೆ ಈಡುಮಾಡಲು ತಂದಿದ್ದರೂ ತುಟಿ ಎರಡು ಮಾಡದೆ ಯಾವ ಭಾವನೆಯೂ ಇಲ್ಲದೆ ನಿಂತಿರುಯಲ್ಲ? ಆಹಾ! ನಗುವಿಯಾ? ನಿನ್ನ ಪ್ರಾಣವನ್ನೇ ಆಹುತಿಮಾಡುತ್ತಿದ್ದಾರೆ. ನಿಃಶಸ್ತ್ರರಾದ ನಮ್ಮನ್ನು ಬಂಧಿಸಿಟ್ಟು ನಿನ್ನ ಕೊಲೆಯನ್ನು ಕಣ್ಮುಟ್ಟಿ ನೋಡಲು ನಿಲ್ಲಿಸಿದ್ದಾರಲ್ಲ ನಮ್ಮನ್ನು. ನಾವಿಲ್ಲಿಗೆ ಇದಕ್ಕೇ ಬಂದ ಹಾಗಾಯಿತೆ? ಕಾಳಿಕಾಮಾತೆಯೆ? ಇಂಥ ಮುಗ್ಧ ಮಗುವಿನ ರಕ್ತದಿಂದ ಸೇಚಿತಳಾಗಿ ನೀನು ತೃಪ್ತಿ ಪಡೆಯುವಿಯಾ?

ಪೂಜಾರಿ:—ಭಟರೇ! ಅದೋ ನೋಡಿ ಈ ಧೂರ್ತನು ಬಂಧನವನ್ನು ತಪ್ಪಿಸಿಕೊಳ್ಳುತ್ತಿರುವನು ಕಟ್ಟಿರಿ ಚೆನ್ನಾಗಿ.

[ಸುದರ್ಶನನ್ನು ಚೆನ್ನಾಗಿ ಬಂಧಿಸುವರು]

ಸುಮತಿ:—ಪೂಜಾರಿಗಳೇ! ನನ್ನ ಕುಮಾರನ ಬದಲಾಗಿ ನನ್ನನ್ನೇ ವಧೆಮಾಡಿಸಿ, ನಿಮಗೆ ಸೆರಗೊಡ್ಡಿ ಬೇಡಿಕೊಳ್ಳುವೆನು.

ಪೂಜಾರಿ:—ಸಾಕು ಬಾಯಿಮುಚ್ಚು. ಹಾಂ! ರಾಜನ್! ಓಂ ಕಾಳಿಕಾಯ ನಮಃ ಓಂ ದುರ್ಗಾಯ ನಮಃ. ಹಾಕು ಏಟು.

(ಏಟು ಹಾಕುವನು)

ಸುಮತಿ:—ದೇವಿ. ಇದೇನು ಮಾಡಿಸುತ್ತಿರುವಿ! (ಚೀರುವಳು.)

(ಶಿರಚ್ಛೇದವಾಗುವುದಿಲ್ಲ. ಶಸ್ತ್ರವು ಮಣಿಯುತ್ತದೆ)

ಪೂಜಾರಿ:—ಅಯ್ಯೋ! ಏನಿದು. ಹೀಗೇಕೆ? ಮಾತೆ ದೇವಿ! ತಾಯೆ? ನಿನ್ನ ನರಬಲಿಗೆ ವಿಘ್ನವಾದುದಕ್ಕೆ ಕುಪಿತಳಾದೆಯೋ? ನನ್ನ ಈ 60 ವರ್ಷದ ಆಯುಷ್ಯದಲ್ಲಿ ಎಂದೂ ಹೀಗಾಗಿಲ್ಲ.

ಕಾಳಿಕಾ:-(ಭಟಭಟ ಸಪ್ಪಳ. ಪ್ರತ್ಯಕ್ಷಳಾಗಿ) ನೀವು ಭಗವದ್ಭಕ್ತನನ್ನು ಕೊಲ್ಲುವಿರಾ? ನಿಮಗದು ಹಿಡಿಸಲಾರದ ತುತ್ತು. ಆತ ಮಹಾಪುರುಷ. ಮಹಾಜ್ಞಾನಿ. ವೃಥಾ ಇಂಥವನಮೇಲೆ ಕೈ ಎತ್ತಿದ ಚೋರನೆ ನಡೆಯುಮ ಸದನಕ್ಕೆ.

[ಚೋರರಾಜನು ಮೃತನಾಗಿ ಬೀಳುವನು]

ಪೂಜಾರಿ:—ತಾಯಿ! ಚೋರರಾಜನನ್ನು........! ಹಾ! ಕ್ಷಮಿಸು. ಶಾಂತಳಾಗು. ನಿನ್ನ ಅಣತಿಯಂತೆ ನಡೆವೆ.

ಕಾಳಿಕಾ ಮಾತೆ:— ಬಂಧಿತರಿಗೆ ಬಿಡುಗಡೆಯಾಗಲಿ. ಕುಮಾರಾ. ನಿನಗೆ ಅನಂತ ಮಂಗಳವಾಗಲಿ. (ಅದೃಶ್ಯಳಾಗುವಳು)

ಪೂಜಾರಿ:—[ಸುಮತಿ ಸುದರ್ಶನರನ್ನು ಬಿಡುಗಡೆಮಾಡಿ] ನೀವು ಧನ್ಯರು. ಮಾತೆ ನಿಮ್ಮೆಲ್ಲರಿಗೆ ಪ್ರಸನ್ನಳಾಗಿದ್ದಾಳೆ. ಇದೋ ಈ ಪ್ರಸಾದ ಹೂ ತೆಗೆದುಕೊಳ್ಳಿರಿ.

ಸುದರ್ಶನ:—ಚೋರ ರಾಜನ ಶವ ಸಂಸ್ಕಾರದ ಕಾರ್ಯ ನಡೆಯಲಿ. ಅದನ್ನು ಮುಗಿಸಿ ಸ್ನಾನಮಾಡಿ ಬಂದು ಪ್ರಸಾದ ಸ್ವೀಕರಿಸುವೆವು.

ಸುಮತಿ:—ಧನ್ಯ ಮಾತೆ. ಧನ್ಯೆ. ಕುಮಾರನು ಜ್ಞಾನಿಯೆಂಬ ವರದಾನಕೊಟ್ಟೆ. ಆತನು ಮಹಾಪುರುಷನಾಗುವನೆಂದು ಹೇಳಿದೆ. ತಾಯೆ. ನಿನ್ನನ್ನೆಂತು ಸ್ತುತಿಸಲಿ. ಕುಮಾರಾ (ಕುಮಾರನನ್ನು ಅಪ್ಪಿಕೊಂಡು) ಇನ್ನು ಮನೆಗೆ ಹೋಗೋಣ ನಡೆ. ಮಾತಾಡುವುದಿಲ್ಲವೆ? ಇದೇನು ಕುಳಿತೇ ಬಿಟ್ಟೆಯಲ್ಲ.

ಸುದರ್ಶನ:—ಅಮ್ಮಾ, ಆತ ಮಹಾ ಪುರುಷನೆಂದು ಕಾಳಿಕಾ ಮಾತೆಯು ಹೇಳಲಿಲ್ಲವೆ! ಆತನ ಬಗ್ಗೆ ನೀನು ಕಾಳಜಿಮಾಡಬೇಡ ಆತನ ಪಾಡಿಗೆ ಆತನನ್ನು ಬಿಡು. ಬೇಕಾದಲ್ಲಿ ಇರಲೊಲ್ಲನೇಕೆ? ಯಾವ ಭಯವೂ ಇಲ್ಲ.

ಪೂಜಾರಿ:—ಹೌದು ತಾಯಿ. ಆತನೊಬ್ಬ ಮಹಾ ಪುರುಷ. ಇಲ್ಲಿಯೇ ಇರಲಿ. ಆಗಲಿ, ಇನ್ನು ಶವ ಸಂಸ್ಕಾರದ ಕಾರ್ಯ ಮುಂದು ವರಿಸುವಾ.

———o———

೩

(ಕೆಲ ದಿನಗಳ ತರುವಾಯ. ಇಕ್ಷುಮತಿ ನದೀ ತೀರದಲ್ಲಿ ಸಿಂಧು ಸೌವೀರ ರಾಷ್ಟ್ರದ ಅರಸು—ರಹೂಗಣ–ಪಲ್ಲಕ್ಕಿಯಲ್ಲಿ ಕುಳಿತು ಕಪಿಲ ಮಹರ್ಷಿಗಳಿಂದ ತತ್ತ್ವೋಪದೇಶ ಪಡೆಯಲು ನಡೆದಿದ್ದಾನೆ.)

ಪಲ್ಲಕ್ಕಿಹೊತ್ತವರು:- ಭೋ, ಭೋ, ಭೋ, ಭೋ.

ರಾಜಾ ರಹೂಗಣ:- ಏನಿದು ? ಹೀಗೆ ವಕ್ರ ವಕ್ರವಾಗಿ ನಡೆಯುತ್ತಿರುವುದೇಕೆ ?

ಮುಖ್ಯವಾಹಕ:- ಮಹಾರಾಜ ! ಪಲ್ಲಕ್ಕಿಯ ವಾಹಕರಲ್ಲಿ ಒಬ್ಬನು ಕಡಮೆ ಇದ್ದ ಕಾರಣ, ಇದೇ ಈಗ ಈ ನದೀ ತೀರದಲ್ಲಿದ್ದ ಈ ಹೊಸ ಮನುಷ್ಯನನ್ನು ತಂದಿದ್ದೇವಲ್ಲ; ಆತ ಸರಿಯಾಗಿ ನಡೆಯುತ್ತಲಿಲ್ಲ.

ರಾಜಾ:- ಓಹೋ ! ಒಬ್ಬನಿಂದ ಈ ದುರವಸ್ಥೆ ! ಸಹವಾಸದ ಪರಿಣಾಮವೇ ಹೀಗೆ. ಸರಿ. ಅವನಿಗೆ ಚೆನ್ನಾಗಿ ನಡೆಯಲು ಹೇಳು.

(ಭೋ, ಭೋ, ಭೋ, ಭೋ.)

ರಾಜಾ:- ಇದೇನು ಇವನು ಹೀಗೇಕೆ ವಕ್ರವಾಗಿ ನಡೆಯುತ್ತಾನೆ ? ಏನೋ ! ಏನಿದು ? ಪಾಪ ! ಬಹಳ ದೂರ ನಡೆದಿದೀಯೇನೊ ? ಅಲ್ಲವೆ ? ಕೈಕಾಲೆಲ್ಲ ಸೋತೇಹೋಗಿವೆಯೇನೋ ನಿನ್ನವು ? ನಿನಗೆ ಭಾರವಾಗಿದೆಯೇನೊ ! ಅಯ್ಯೋ! ನೀನೇನು ಮುದುಕನೆ ?........ಹಾಂ ! ನನ್ನ ಮಾತಿನ ಲಕ್ಷ್ಯವೇ ಇಲ್ಲ ! ಕೊಬ್ಬಿದೀಯೆ ! ನಿನಗೆ ದಂಡಿಸಿದರೆ ಸರಿಯಾದ ಮಾರ್ಗಕ್ಕೆ ಬರುವೆ.

ಕುಮಾರಾ:- ಲೌಕಿಕ ದೃಷ್ಟಿಯಿಂದ ನೀನು ಹೇಳುವುದೆಲ್ಲ ಸರಿಯೆನಬೇಕು. ಆದರೆ ವಸ್ತುತಃ ತಾತ್ವಿಕವಾಗಿ ಅಸಂಬದ್ಧ. ಹೊತ್ತವನಿಗೆ ಭಾರ ನನಗಲ್ಲ. ಕೊಬ್ಬಿದುದು ನನ್ನ ದೇಹ. ನಾನಲ್ಲ. ಈ ಶರೀರದ ಕಾರ್ಯ ನನ್ನವಲ್ಲ. ಶರೀರದ ಧರ್ಮ ಆತ್ಮಕ್ಕಿಲ್ಲ. ಆತ್ಮಕ್ಕೆ ಆಯಾಸವಿಲ್ಲ. ಸೊಕ್ಕಿಲ್ಲ. ಸಾವು ನೋವೂ ಇಲ್ಲ. ನೀನು ರಾಜ, ಒಡೆಯ, ನಾನು ಪ್ರಜೆ. ಭೃತ್ಯ ಎಂದು ನೀನು ತಿಳಿದುದೂ ತಪ್ಪು. ಸ್ವಾಮಿ ಭೃತ್ಯ ಸಂಬಂಧ ಪರಮಾತ್ಮ ಜೀವಾತ್ಮರಲ್ಲಿ ಹೊರತು ಅನ್ಯರಲ್ಲಿ ಕೂಡದು. ಈ ಲೋಕದಲ್ಲಿ

ರಾಜನಾರು? ಭೃತ್ಯನಾರು? ಕೋಪಿಸಬೇಡ. ನೀನು ದಂಡಿಸುವುದಾಗಿ ಹೇಳಿದಿ. ಹೃದ್ಗುಹಾವಾಸಿಯಾದ ಪರಮಾತ್ಮನ ಧ್ಯಾನದಲ್ಲಿದ್ದು ಆತನ ಸಾಮೀಪ್ಯದಲ್ಲಿ ನೆಲೆಯಾಗಿ ನಿಂತು, ಹೊರಗೆ ಹುಚ್ಚನಂತೆಯೂ ಮೂಕನಂತೆಯೂ ನಡೆಯುತ್ತಿರುವ ನಾನು, ಈಗಾಗಲೇ ಜನರಿಂದ ತಿರಸ್ಕೃತನಾಗಿದ್ದೇನೆ. ಹೊಡೆದು ಕೊಲ್ಲುವವರನ್ನೂ ಪ್ರೀತಿಸುತ್ತೇನೆ. ಅಂದ ಮೇಲೆ ನಿನ್ನ ದಂಡನೆಯಿಂದ ನನಗಾಗುವ ಪರಿಣಾಮವೇನು?

ರಾಜ ರಹೂಗಣ:- (ಪಲ್ಲಕ್ಕಿಯಿಂದ ಕೆಳಗೆ ಧುಮುಕಿ, ಆ ಬ್ರಾಹ್ಮಣ ಕುಮಾರನನ್ನು ದೀರ್ಘದಂಡವತ್ ನಮಸ್ಕರಿಸಿ) ಓ ಮಹಾತ್ಮಾ! ನೀನಾರು? ಬ್ರಹ್ಮ ತೇಜಸ್ಸನ್ನು ಗುಪ್ತವಾಗಿಟ್ಟುಕೊಂಡು ಸಂಚರಿಸುತ್ತಿರುವ ಕಾರಣವೇನು? ಯಜ್ಞೋಪವೀತವಿದೆ. ನೀನು ಬ್ರಾಹ್ಮಣನೇ ಹೌದು. ಆದರೆ ನಿನ್ನ ವೇಷ ಹಾಸ್ಯದಾಯಕವಾಗಿದೆಯಲ್ಲ, ಏನಿದು? ನಿನ್ನ ವೃತ್ತಾಂತ ತಿಳಿಸು. ನನ್ನನ್ನು ಅನುಗ್ರಹಿಸಲು ಕಪಿಲ ಮುನಿಗಳೇ ಈ ರೂಪ ತಾಳಿ ಬಂದರೆ? ನಾನು ಯಾವ ಆಯುಧಕ್ಕೂ ಅಂಜುವವನಲ್ಲ. ಸಜ್ಜನರ ದ್ರೋಹಕ್ಕೆ ಬೆದರುವೆ. ಆದ್ದರಿಂದ ನಿನ್ನ ನಿಜ ಸ್ಥಿತಿಯನ್ನು ಹೇಳು. ನಿನ್ನ ಒಂದೊಂದು ಮಾತು ಅರ್ಥಗರ್ಭಿತವಾಗಿದೆ.

ಪಲ್ಲಕ್ಕಿಯನ್ನು ಹೊರುತ್ತಿದ್ದರೂ, ಹೊರುವವನಲ್ಲವೆಂದು ಹೇಳಿದೆಯಲ್ಲ! ಅದು ಹೇಗೆ? ಒಲೆಯ ಮೇಲಿಟ್ಟ ನೀರು ಕುದಿದರೆ, ಅದರೊಳಗೆ ಹಾಕಿದ ಅಕ್ಕಿಯೂ ಬೇಯುವುದಿಲ್ಲವೆ? ಅಂತೇ ಜೀವಾತ್ಮನು, ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಕರ್ಮ ವಾಸನೆ, ಇವುಗಳ ಮಧ್ಯೆ ಬಲವಾಗಿ ಬಂಧಿತನಾಗಿರುವಾಗ, ಶುದ್ಧಸ್ವರೂಪನಾದರೂ ಅವನಿಗೆ ಇವುಗಳ ಮೂಲಕ ಸಂಸಾರದ ಸುಖ ದುಃಖ ತಗಲದೇ ಬಿಟ್ಟಾವೆ?

ನಾನು ತತ್ವೋಪದೇಶ ಪಡೆಯಲೋಸುಗವೇ ಹೊರಟಿದ್ದೆ. ನೀವು ಪರಮಾನುಗ್ರಹ ಮಾಡಿ ಈ ಮಂದ ಮತಿಗೆ ಈ ತತ್ವಗಳನ್ನು ತಿಳಿಸಬೇಕು.

ಕುಮಾರಾ:- ಇದು ನೋಡು. ತತ್ವದ ಜ್ಞಾನವಾಗಬೇಕಾದರೆ ಮೋಕ್ಷವೊಂದನ್ನುಳಿದು ಸಂಸಾರವು ಅಸಾರವೆಂಬುದು ಚೆನ್ನಾಗಿ ಮೊದಲು ಮನದಟ್ಟಾಗಬೇಕು. ಈ ತತ್ವಜ್ಞಾನ ವೇದಾಂತ ಪರಿಶೀಲನೆಯ ಜೊತೆಗೆ, ನಿಜವಾದ ವಿರಕ್ತಿಬೇಕು. ಆಗ ಅನುಭವ ಜನ್ಯವಾದ ಜ್ಞಾನ ಉದಯವಾಗುವುದು.

ರಜಸ್ತಮೋ ಗುಣಗಳಿಗೆ ವಶವಾಗಿ ಇಂದ್ರಿಯಗಳ ಮೂಲಕ ಕರ್ಮ ನಡೆಯುವವು. ಈ ಕರ್ಮಗಳಿಗನುಸಾರವಾಗಿ ಜನ್ಮ ಬರುವವು. ಹೀಗೆ ಜನ್ಮ ಜನ್ಮಕ್ಕೂ ಕರ್ಮವಾಸನೆ, ವಿಷಯಾಸಕ್ತಿಯು ಜೀವನಿಗೆ ಸೂಕ್ಷ್ಮವಾದ ದೇಹದ ರೂಪದಲ್ಲಿಯೇ ಅಂಬ ಬರುವುದು. ಈ ಸೂಕ್ಷ್ಮ ದೇಹವೇ ಪುನಃ ಪುನಃ ಹುಟ್ಟಿ ಬರುತ್ತಿರುವುದರ ಮೂಲಕಾರಣ ಈ ಬಂಧನದಿಂದ, ಅಹಂಕಾರ ಮಮಕಾರಕ್ಕೆ ಒಳ ಪಟ್ಟು ಶುದ್ಧಸ್ವರೂಪಿ ಪರಮಾತ್ಮನಿಗೆ ಶರೀರ ಭೂತವೂ ಆಗಿದ್ದ ಜೀವಾತ್ಮನೂ ದುಃಖಕ್ಕೆ ಈಡಾಗುತ್ತಾನೆ. ಹೀಗೆ ಈ ಜಡಮಯವಾದ ಇಂದ್ರಿಯ. ಮನಸ್ಸು ಮುಂತಾದ ಪ್ರಕೃತಿಯ ವ್ಯಾಪಾರಗಳನ್ನು ಆತ್ಮಕ್ಕೆ ಆರೋಪಿಸುವವರು ಮೂಢರು.

ಜನ್ಮಗಳಿಗೆ ಕಾರಣವಾದ ಕರ್ಮವಾಸನೆ,ವಿಷಯಾಸಕ್ತಿಯ ಗಂಟನ್ನು ಕರಗಿಸುವುದೇ ಮುಖ್ಯ. ಅದರಿಂದ ಬಿಡುಗಡೆ ಹೊಂದುವುದೇ ಮುಕ್ತಿ. ಜೀವಾತ್ಮನು ಸಾಧನೆಯ ಮೂಲಕ ತನ್ನ ಶಕ್ತಿಯನ್ನು ಸಂಪೂರ್ಣವಾಗಿ ಅರಳಿಸಿಕೊಂಡಾಗಲೇ ಈ ಬಂಧನದಿಂದ ಬಿಡುಗಡೆ. ಬಂಧನ ಬಂದಿರುವುದು ಕರ್ಮದಿಂದ. ಕರ್ಮನಡೆಯುವುದು ಇಂದ್ರಿಯಗಳಿಂದ. ಇಂದ್ರಿಯಗಳನ್ನು ಸ್ವಾಧೀನ ಪಡಿಸಿಕೊಂಡಿರುವುದು ಮನಸ್ಸು. ಹೀಗೆ ಮನಸ್ಸೇ ಮುಖ್ಯ. ಅದು ಕರ್ಮ ಮಾಡುವಾಗ ಕುಶಲವಾಗಿ ಮಾಡಬೇಕು. ಮನಸ್ಸು ನಿರ್ವ್ಯಾಪಾರವಾಗಿ, ನಿರ್ಲಿಪ್ತವಾಗಿ ಇದ್ದರೆ ಮೋಕ್ಷಕ್ಕೆದಾರಿ. ಅಗ್ನಿಯು ಎಣ್ಣೆ ಬತ್ತಿಗಳನ್ನು ಹಿಡಿದು ಉರಿಯುವಾಗ, ಅದರ ಜ್ವಾಲೆಯು ಹೊಗೆಯೊಡನೆಯೇ ಕೂಡಿರುವಂತೆ, ಮನಸ್ಸು ಸತ್ವಾದಿ ಗುಣಗಳೊಡನೆ ಬೆರೆತು, ತನ್ಮೂಲಕ ತೊಳಲಿ ರಾಗದ್ವೇಷಕ್ಕೆ ಗುರಿಯಾಗುವುದು. ಗುಣಗಳ ಸಂಪರ್ಕವಿಲ್ಲ

ದಾಗ, ನಿರ್ವ್ಯಾಪಾರವಾಗಿ ಸಹಜವಾದ, ಶುದ್ಧ ಸತ್ವರೂಪವನ್ನೂ ಹೊಂದು ವುದು. ಮುಂದೆ ಸತ್ವವನ್ನೂ ಮೀರಿ ಇಂದ್ರಿಯಾತೀತವಾದ ಆತ್ಮಾನಂದ ದೊರೆಯುವುದು.

ಆದರೆ ನೋಡು. ಮೋಕ್ಷವನ್ನು ಸಂಪಾದಿಸಿಕೊಡಬಲ್ಲ ಮನಸ್ಸಿನಲ್ಲಿ ಬರುವ ಮಮಕಾರವೂ, ತಜ್ಜನ್ಯವಾದ ಶೋಕ ಮೋಹಾದಿಗಳು ನಿರ್ಮೂಲ ವಾಗಿ ಹೋಗುವವರೆಗೆ ಜೀವಾತ್ಮನು ತನ್ನ ಅಂತರ್ಗತವಾಗಿಯೇ ಇರುವ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯಲಾರನು. ಆದ್ದರಿಂದ ನೀನು ಭಗವಂತನ ಪಾದಾಶ್ರಯವೆಂಬ ಶಸ್ತ್ರದಿಂದ ಮನಸ್ಸಿಗೆ ಅಂಟಿರುವ ಮಮ ಕಾರ ಶತ್ರುವನ್ನು ವಧಿಸು.

ರಹೂಗಣ:-ಮಹಾತ್ಮಾ! ನಿಮ್ಮ ಉಪದೇಶಾಮೃತದಿಂದ ನನಗಿಂದು ಹೊಸ ಕಣ್ಣು ಬಂದಿವೆ. ಅಧಿಕಾರ ಮದದಿಂದ ನಿಮ್ಮನ್ನು ಪಲ್ಲಕ್ಕಿಗೆ ಹೂಡಿ ಮಹಾ ಪಾತಕಿಯಾಗಿದ್ದೇನೆ. ಕ್ಷಮಿಸಿ ಕಾಪಾಡಬೇಕು. ಜೀಯಾ. ತಮ್ಮ ವೃತ್ತಾಂತವನ್ನು ತಿಳಿಸಬೇಕು.

[ ಸುಮತಿ-ಸುದರ್ಶನರ ಪ್ರವೇಶ ]

ಸುಮತಿ: ಇದೋ! ಸುದರ್ಶನಾ! ನಮ್ಮ ಕುಮಾರಾ! ಏನಿದು? ಯಾರೋ ರಾಜರು ಕೈಮುಗಿದುಕೊಂಡು ನಿಂತಿದ್ದಾರೆ ಆತನೆದುರಿಗೆ [ಸಮೀಪಕ್ಕೆ ಬಂದು] ಕುಮಾರಾ! ನಾವು ಹಿರಿಯರ ಶ್ರಾದ್ಧಕ್ಕಾಗಿ ನದೀ ತೀರದ ಕ್ಷೇತ್ರಕ್ಕೆ ಹೊರಟದ್ದೇವೆ. ಪರಿವಾರವೆಲ್ಲ ಮುಂದೆ ಹೋಗಿದೆ. ನಡೆ ಹೋಗುವಾ.

ರಹೂಗಣ:- ಮಹಾತ್ಮಾ, ಇವರಾರು? ನಿಮ್ಮ ಮಾತೆಯೆ?

ಕುಮಾರಾ:-ಹೌದು, ಶರೀರದ ಮೂಲಕವಾಗಿ ಬಂದಿರುವ ಸಂಬಂಧ ಏದು.

ಸುದರ್ಶನಾ:- ಹಾಂ! ಕುಮಾರನು ಮಾತಾಡುತ್ತಿದ್ದಾನೆ!

ರಹೂಗಣ:- ಮಾತಾಡಿದರೆ ಆಶ್ಚರ್ಯವೆ?

ಸುದರ್ಶನಾ:- ಹೌದು, ಮಹಾರಾಜ! ಈತನು ನಮ್ಮ ತಮ್ಮ. ಹುಟ್ಟಿದಂದಿನಿಂದ ಈ ತನಕ ಜಡನಂತೆ ಇದ್ದು ತಿರುಗುತ್ತಿದ್ದಾನೆ. ಮಾತನ್ನೇ ಆಡಿರಲಿಲ್ಲ. ಮೂಕನೆಂದೇ ತಿಳಿದಿದ್ದೆವು.

ಸುಮತಿ:- ಆತನ ಚರಿತೆಗಳೇ ವಿಚಿತ್ರವಾಗಿವೆ, ರಾಜರೆ.

ರಹೂಗಣ:- ಮಹಾತ್ಮರೆ ತಮ್ಮ ವೃತಾಂತವನ್ನು ತಿಳಿಹಿಸಬೇಕು.

ಕುಮಾರಾ:- ಕೇಳು ರಾಜಾ, ನಾನು ಪೂರ್ವದಲ್ಲಿ ಭರತನೆಂಬ ರಾಜನಾಗಿದ್ದೆನು. ಹತ್ತು ಸಾವಿರ ವರ್ಷ ಭಗವದಾರಾಧನಾ ರೂಪವೆಂದು ಭಾವಿಸಿ ರಾಜ್ಯವಾಳಿದೆ. ಕೊನೆಗೆ ರಾಜ್ಯವನ್ನು ತ್ಯಜಿಸಿ ವಾನ ಪ್ರಸ್ಥ ಆಶ್ರಮದಲ್ಲಿದ್ದಾಗ, ಒಂದು ಜಿಂಕೆಯ ಮರಿಯಲ್ಲಿ ಮೋಹ ಹುಟ್ಟಿ ಅದನ್ನು ಸಾಕಿದೆ. ಮೋಹವು ದಿನ ದಿನಕ್ಕೆ ಹೆಚ್ಚಿತು. ಅದರ ಚಿಂತನೆಯೇ ಆಯಿತು. ಭಗವದಾರಾಧನೆ, ಧ್ಯಾನೋಪಸನಾದಿಗಳು ಕ್ರಮವಾಗಿ ನಿಂತೇ ಹೋದವು. ಮರಣ ಕಾಲದಲ್ಲಿಯೂ ಸಹ ಜಿಂಕೆ ಮರಿಯ ಸ್ಮರಣವು ತಪ್ಪದೆ, ಅದರ ಚಿಂತನೆಯಲ್ಲಿಯೇ ಪ್ರಾಣೋತ್ಕ್ರಮಣವಮಾಡಿದೆ. ಅದರಿಂದಾಗಿ ಮುಂದಿನ ಜನ್ಮದಲ್ಲಿ ಜಿಂಕೆಯಾಗಿಯೇ ಹುಟ್ಟಿದೆ. ಆದರೆ ಭಗವದಾರಾಧನೆಯ ಫಲವನ್ನೆಂತು ಸ್ತುತಿಸಲಿ! ಹಿಂದಿನ ಆ ಆರಾಧನೆಯ ಫಲವಾಗಿ ಜಿಂಕೆಯಾಗಿ ಜನ್ಮವೆತ್ತಿದ್ದರೂ, ಹಿಂದಿನ ಜನ್ಮದ ಸ್ಮರಣ ಮಾತ್ರ ತಪ್ಪಲಿಲ್ಲ. ಆ ಜಿಂಕೆಯ ದೇಹ ಬಿಟ್ಟಮೇಲೆ ಈ ಬ್ರಾಹ್ಮಣ ಜನ್ಮ ಬಂದಿದೆ.

ಸುಮತಿ:—ಕುಮಾರಾ! ನಮಗೆ ಇಷ್ಟು ದಿನದವರೆಗೆ ತಿಳಿಸಿಯೇ ಇರಲಿಲ್ಲವಲ್ಲ ಮಗು!........ಭರತ ಮಹಾರಾಜನೆ! ನಿನ್ನ ಅರಸುತನದ ಕತೆಗಳನ್ನು ಹೇಳಿ ಜನ ಕೊಂಡಾಡುತ್ತಿದ್ದಾರೆ. ಆದರೆ ರಾಜಾ, ಬಾಲ್ಯದಿಂದಲೂ ನೀನು ಹೀಗೆ ಜಡನಂತೆ ಏಕೆ ಇದ್ದೀಯಾ? ಜಡ–ಭರತನಾಗಿದೀಯಲ್ಲ.

ಕುಮಾರಾ:—ಈಗಲೂ ನನಗೆ ಪೂರ್ವ ಜನ್ಮದ ಸ್ಥಿತಿಯೆಲ್ಲವೂ ನೆನಪಿದೆ. ಈ ಸ್ಮರಣೆಗೆ ನಾನು ಹಿಂದಿನ ಜನ್ಮದಲ್ಲಿ ನಡೆಸಿದ ಭಗವದಾರಾಧನೆಯೇ ಕಾರಣ. ಹಿಂದೆ ಜಿಂಕೆಯ ಸಹವಾಸದಿಂದ ಜಿಂಕೆಯಾಗಿ ಹುಟ್ಟುವ

ಪ್ರಸಂಗ ಬಂತು. ಆದ್ದರಿಂದ ಈಗ ನಾನು ಇತರರೊಡನೆ ಬೆರೆಯದೆ ಇದ್ದೇನೆ. ಹಾಗೆ ಸಹವಾಸಮಾಡಿದರೆ ಮತ್ತಾವ ಕೇಡುಂಟಾಗುವುದೋ ಎಂದು ಸಮಸ್ತ ಸಂಗಗಳನ್ನು ಬಿಟ್ಟು ನಿಂತಲ್ಲಿ ನಿಲ್ಲದೆ ಭೂಸಂಚಾರದಿಂದಲೇ ಕಾಲ ಕಳೆ ಯುತ್ತಿರುವೆನು.

ಸುದರ್ಶನ:—ಧನ್ಯ ಕುಮಾರಾ! ನಮ್ಮ ವಂಶದಲ್ಲಿ ಜನ್ಮವೆತ್ತಿ ನಮ್ಮ ವಂಶವನ್ನು ಬೆಳಗಿದೆ, ಮಹಾತ್ಮ, ನೀನು.

ರಹೂಗಣ:—ನಿಃಸಂಶಯ. ಅಹಂಕಾರಿಯಾದ ನನ್ನನ್ನು ಉದ್ಧರಿಸ ಲೋಸುಗವೇ ತಮ್ಮ ಮೌನವನ್ನು ಮುರಿದು ಉಪದೇಶಿಸಿದ್ದಕ್ಕಾಗಿ, ನಾನವರ ಉಪಕಾರವನ್ನು ತೀರಿಸಲಾರೆ.

ಸುಮತಿ:—ಈಗ ಹಿರಿಯರು ಬದುಕಿದ್ದರೆ ಅದೆಷ್ಟು ಸಂತೋಷ ಪಡುತ್ತಿದ್ದರು?

ರಹೂಗಣ:—ತಾಯಿ! ನೀನು ಧನ್ಯಳು. ನಿಮ್ಮ ವಂಶ ಧನ್ಯ. ನಡೆಯಿರಿ. ನಾವೆಲ್ಲರೂ ಕೂಡಿಯೇ ಹೋಗೋಣ.

ಸುದರ್ಶನ:—ಓ ಹೋ! ಕುಮಾರ........ಅಲ್ಲ ಭರತ ಮಹಾರಾಜ ಹೋಗಿಬಿಟ್ಟರಲ್ಲ.

ರಹೂಗಣ:—ಇದೇನು? ಮಹಾತ್ಮಾ ಭರತ ಅದೃಶ್ಯರಾದರಲ್ಲ. ಆಯಿತು. ತಮ್ಮ ಕೆಲಸ ತೀರಿದ ಮೇಲೆ ಮಹಾತ್ಮರು ಅನವಶ್ಯಕವಾಗಿ ನಿಲ್ಲುವುದಿಲ್ಲ...........ಮಹಾತ್ಮಾ ಭರತನಿಗೆ ಜಯವಾಗಲಿ.

ಸುಮತಿ:—[ಸ್ವಾಗತ] ಮಹಾತ್ಮಾ.........ಜಡ.........ಭರತ........ ನನ್ನ ಮಗ...........ಭರತ! ನಿನಗೆ ಮಂಗಳವಾಗಲಿ.

—— x ——

# ಕಾಮನ ತ್ಯಾಗ

## -: ಮುನ್ನುಡಿ :-

ನಮ್ಮ ದೇಶದಲ್ಲೆಲ್ಲ ಫಾಲ್ಗುಣ ಶುದ್ಧ ಪೌರ್ಣಿಮೆಯ ದಿವಸ ಕಾಮನ ಒಂದು ಚಿತ್ರವನ್ನು ಕಾಗದದಲ್ಲಿ ಬರೆದು ಅದನ್ನು ದಹಿಸುವ ಉತ್ಸವವನ್ನು ಒಳ್ಳೇ ಉತ್ಸಾಹದಿಂದ ನಡೆಸುತ್ತಾರೆ. ಈ ಉತ್ಸವದ ಉದ್ದೇಶವೇನು ? ಇತಿಹಾಸವೇನು ? ಇಲ್ಲಿ ಸಂಕ್ಷೇಪವಾಗಿ ಚಿತ್ರಿಸಲಾಗಿದೆ.

## -: ಪಾತ್ರಗಳು :-

**ಮಹಾದೇವ. ಪಾರ್ವತಿ. ಕಾಮದೇವ. ರತಿದೇವಿ. ದೇವಗುರು. ನಂದಿ. ಸೇವಕರು.**

(ಕುಸುಮಾವತಿಯ ಪಟ್ಟಣ. ಕಾಮದೇವನ ಅರಮನೆ. ಕಾಮದೇವ, ರತಿದೇವಿ ಸರಸ ಸಲ್ಲಾಪಗಳಲ್ಲಿ ಕುಳಿತಿದ್ದಾರೆ. ನೃತ್ಯ ನಡೆದಿದೆ. ನೃತ್ಯ ಮುಗಿದ ಮೇಲೆ.)

ಕಾಮದೇವ:- ದೇವಿ ! ನೋಡಿದೆಯಾ, ನರ್ತಕಿಯರು ತಮ್ಮ ಭಾವಗಳನ್ನು ಅದೆಷ್ಟು, ಮನೋಹರವಾಗಿ ನೃತ್ಯದಲ್ಲಿ ಭಾಷಾಂತರಿಸಿ ನಮಗೆ ತಿಳಿಸುತ್ತಾರೆ. ಇವರ ಕಲೆಯನ್ನು ಯಾರಾದರೂ ಮೆಚ್ಚತಕ್ಕದ್ದೆ.

ರತಿದೇವಿ:- ಪ್ರಿಯಾ ! ನಿನ್ನ ಕಲಾ ಪ್ರಿಯತೆಯೇ ಇದಕ್ಕೆ ಕಾರಣ. ನಿನ್ನ ಪ್ರೋತ್ಸಾಹನವೇ ಇವರ ಉತ್ಕರ್ಷೆಗೆ ಉಪಷ್ಟಂಭ.

ಸೇವಕ:- ದೊರೆಗಳಿಗೆ ಜಯವಾಗಲಿ ! ದೇವಗುರುಗಳು ದಯಮಾಡಿಸಿದ್ದಾರೆ.

ಕಾಮ:- (ಎದ್ದು ನಿಂತು) ಸ್ವಾಗತಿಸು, ಸ್ವಾಗತಿಸು ಇದೋ ಬಂದೆ.

ರತಿ:- ಗುರುಗಳ ಪೂಜೆಗೆ ಅಣಿಮಾಡಲು ನಾನು ಒಳಗೆ ಹೋಗುವೆ. (ಹೋಗುವಳು.)

ಕಾಮ:- ಆಗಲಿ. (ದೇವಗುರುಗಳ ಆಗಮನ) ಗುರುವರಾ, ದೀರ್ಘ ದಂಡ ಪ್ರಣಾಮಗಳು ತಮಗೆ ಸುಸ್ವಾಗತ. ಸುಖಾಸೀನರಾಗಬೇಕು.

ಗು:- ನಿನಗೆ ಮಂಗಳವಾಗಲಿ ರತಿಪತಿಯೇ !
(ಸುಖಾಸೀನರಾಗುವರು.)

ಕಾ:- ಇಂದು ನನ್ನ ಭಾಗ್ಯಕ್ಕೆ ಎಣೆಯಿಲ್ಲ. ತಾವೇ ಅನುಗ್ರಹಿಸಿ ದರ್ಶನ ಲಾಭ ಸೇವೆಯ ಲಾಭ, ಒದಗಿಸಿ ಕೊಟ್ಟಿರಿ. ಅದಕ್ಕಾಗಿ ನಾನು ಋಣಿ. ಆದರೆ ತಮ್ಮ ಸ್ವಾಗತವನ್ನು ಪುರದ ಮಹಾದ್ವಾರದಲ್ಲಿ ಪರಿವಾರ ಸಹಿತವಾಗಿ ಮಾಡುವ ಗೌರವವು ನನಗೆ ಲಭಿಸಲಿಲ್ಲವೆಂಬ ಕೊರಗು.

ಗುರು:- ಪೂಬಾಣಯ್ಯ ! ನಿನ್ನ ನಗರದ ಪರಿಪರಿಯ ಪುಷ್ಪವನದ ತರುಲತಾವಳಿ, ಪರಿಮಳ ಭರಿತ ತಂಗಾಳಿ ನನ್ನನ್ನು ಸ್ವಾಗತಿಸಿ, ನಿನ್ನ ಉಪಕಾರ ಬುದ್ಧಿಯನ್ನು ತೋರಿದವು. ತರುಲತಾವಳಿಗಳಲ್ಲಿ ಕುಳಿತು ಸುಸ್ವರ ದಿಂದ ಗಾನ ಮಾಳ್ಪ ಪಕ್ಷಿಗಳು ನನ್ನನ್ನು ಬರಮಾಡಿಕೊಂಡು ನಿನ್ನ ಕೀರ್ತಿ ಯನ್ನು ಹಾಡಿ ಹೇಳಿದವು.

ಕಾ:- ಗುರುವರ, ನನ್ನ ಮೇಲಿನ ವಾತ್ಸಲ್ಯವೇ ಕಾರಣ ನಿಮ್ಮ ಈ ವಾಕ್ಯಮಯ ವರ್ಣನೆಗೆ. ಅದಕ್ಕಾಗಿ ನಾನು ಉಪಕೃತ.

ಗು:- ನಾನು ಹೇಳುವುದು ಬರೀ ಕಾವ್ಯದ ಮಾತಲ್ಲ. ಕಣ್ಣಾರೆ ಕಂಡದ್ದು. ನಿನ್ನ ನಗರ ನಿನ್ನ ಪುರ, ನಿನ್ನ ಮಂದಿರ ಎಲ್ಲವೂ ಸುಂದರ ವಾಗಿವೆ. ಈ ನಿನ್ನ ಮಂದಿರವನ್ನೇ ನೋಡು. ಚಂದ್ರಕಾಂತ ಮಣಿಗಳಿಂ ದಲೂ ನೀಲನವರತ್ನಾದಿಗಳಿಂದಲೂ ಸಾಂದ್ರವಾಗಿ ಚಂದ್ರರವಿಗಳ ಅಮಿತ ವಾದ ಪ್ರಭೆಯೋ ಎಂಬಂತೆ ತೋರುತ್ತಿದೆ.

ಕಾ:- ಜೀಯಾ, ಈ ಲೌಕಿಕ ಸೌಂದರ್ಯ ಸುಖದಲ್ಲಿಯೇ ಮಗ್ನ ವಾಗಿರುವ ನಮ್ಮನ್ನು ಇದರಲ್ಲಿಯೇ ಪ್ರೋತ್ಸಾಹಿಸಿದರೆ, ಪರಮಾತ್ಮನನ್ನೇ ಮರೆತು ಹೋದೇವು, ಗುರುದೇವ.

ಗು:- ಅಜ್ಞಾನಿಗಳಾದ ಸಾಮಾನ್ಯರಿಗೆ ಆ ಮಾತು ನಿನಗಲ್ಲ. ಈ ಲೌಕಿಕ ಸೌಂದರ್ಯಗಳೆಲ್ಲಾ ಆ ಪರಮಾತ್ಮನವೇ. ಆತನೇ ಅಲ್ಲಿ ಇದ್ದಾ ನೆಂಬುದನ್ನು ಸ್ಮರಣೆಯಲ್ಲಿಟ್ಟುಕೊಂಡಿರುವ ನಿನಗೆ ಆ ಭಯವೆಲ್ಲಿದೆ ಸ್ಮರನೆ ?

ಕಾಃ- ಸರ್ವವ್ಯಾಪ್ತನಾದ, ಸರ್ವಾಧಾರನಾದ, ಸೃಷ್ಟ್ಯಾದ್ಯದೃಷ್ಟ ಕರ್ತನಾದ, ಆ ಅಗಮ್ಯಮಹಿಮ ಓತಪ್ರೋತವಾಗಿ ಎಲ್ಲೆಡೆಗೂ ರಾರಾಜಿಸುತ್ತಾನೆ. ಆತನ ಸ್ಮರಣೆಯೇ ನಮಗೆ ತಾರಕ.

ಗು:- ಆತನ ಆಜ್ಞೆಯಂತೆ, ಆತನ ಸೃಷ್ಟಿಲೀಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ ನೀನು. ನಿನಗೆ ಆತನಲ್ಲಿರುವ ಭಕ್ತಿಯನ್ನು ಬೇರೆ ಹೇಳಬೇಕೆ? ಪರಮಾತ್ಮನ ಅಸದೃಶವಾದ ಬಲಲಾವಣ್ಯಾದಿ ಗುಣಗಳನ್ನು ಉಪಾಸನೆ ಮಾಡುವ ನಿನಗೆ ಪರಮಾತ್ಮ ದೊಡ್ಡ ಅಧಿಕಾರ ದಯ ಪಾಲಿಸಿದ್ದಾನೆ.

ಕಾ:- ಆತ ಕೊಟ್ಟ ಅಧಿಕಾರ. ಆತನೇ ನಡೆಸತಕ್ಕಾತ.

ಗು:- ಅಲ್ಲವೇ ಮತ್ತೆ! ಬಲ ಮತ್ತು ಲಾವಣ್ಯದರಾಶಿಯಾದ ಪ್ರಭುವನ್ನು ಉಪಾಶಿಸುವ ನಿನ್ನ ಅನುಗ್ರಹ ಪಡೆದ ಜನರಿಗೆ, ಬಲ ಲಾವಣ್ಯ ಕೊಟ್ಟು, ಪರಮಾತ್ಮನ ಸ್ಮರಣೆಯನ್ನು ಕೊಟ್ಟು ಅವರ ದುರ್ಮತಿಯನ್ನು ಕಳೆಯುವೆ.

ಕಾ:- ಗುರುದೇವ! ಅಜ್ಞಾನದಿಂದ ತಮಗೆ ದೊರೆವ ರೂಪಲಾವಣ್ಯ ಬಲವೆಲ್ಲವೂ ಪ್ರಭುವಿನಿಂದ ಬಂದುದೆಂಬುದನ್ನರಿಯದೆ, ಆತನ ವಿಸ್ಮೃತಿಯಲ್ಲಿದ್ದವರು ಮಾತ್ರರಾಗಿ ಅಧೋಗತಿಗೆ ಹೋಗುತ್ತಾರೆ.

ಗು:- ಹೌದು, ಕಾಮದೇವ. ಮಾನವ ಜೀವಿತವೇ ಹೀಗಿದೆ. ತನ್ನ ಹುಟ್ಟಿನ ಮೂಲವನ್ನರಿತು, ಹುಟ್ಟಿನ ನಿವಾರಣೆ ಮಾಡಿಕೊಳ್ಳುವ ಪ್ರಯತ್ನದಲ್ಲಿದ್ದವರಿಗೆ ನಿನ್ನ ಅನುಗ್ರಹವಾದರೆ ಗೆಲ್ಲುತ್ತಾರೆ. ಇಲ್ಲವೆ ಅಡ್ಡ ದಾರಿಗೆ ಬೀಳುತ್ತಾರೆ.

ಕಾ:- ಎಲ್ಲಕ್ಕೂ ಪರಮಾತ್ಮನ ಅನುಗ್ರಹವೇ ಮುಖ್ಯ ಕಾರಣ. ಆತ ಕೊಟ್ಟ ಸೇವೆಯನ್ನು ಮಾಡುವದಷ್ಟು ನಮ್ಮ ಕರ್ತವ್ಯ.

ಗು:- ಅಲ್ಲವೆ ಮತ್ತೆ? ರತಿಪತಿಯೇ! ಪರಮಾತ್ಮನು ನಿನಗಾಗಿ ಇನ್ನೊಂದು ಮಹತ್ವದ ಕರ್ತವ್ಯವನ್ನು ಹಾಕಿದ್ದಾನೆ.

ಕಾ:- ಅಹಾ, ನನ್ನ ಭಾಗ್ಯಕ್ಕೆ ಈಡಿಲ್ಲ. ಆತನ ಆಣತಿಯನಾಂತು ಶಿರದಲಿ ವಹಿಸಿ ನಡೆವುದೇ ಎನಗೆ ಸೌಭಾಗ್ಯ. ಅದೆಂಥ ಪರಮೋಪಕಾರಿ ನಮ್ಮ ಪರಮಾತ್ಮ. ನಮಗೆ ಸೇವೆ ಕೊಟ್ಟು ಪೊರೆವ. ಪ್ರಭುವರಾ ನಿನಗೆ ಜಯ ಜಯ. ಕಾವಕೋಟಿ ನವಸುಲಾವಣ್ಯನೆ ನಿನಗೆ ವಿಜಯತು.

ಗು:- ಕಾಮದೇವ ! ನಿನ್ನ ದೈವಭಕ್ತಿಯು ಅನುಕರಣೀಯವಾಗಿದೆ.

ಕಾ:- ಗುರುದೇವ ! ಆಜ್ಞಾಪಿಸಿ. ಪ್ರಭುವಾಣತಿಯನ್ನು ಶ್ರವಣ ಮಾಡಿಸಿ ನನಗೆ ಅನುಗ್ರಹಿಸಿರಿ.

ಗು:- ತಾರಕಾಸುರನು ಮಹಾ ಉನ್ಮತ್ತನಾಗಿ ಸಕಲ ಲೋಕಗಳಲ್ಲಿಯೂ ಕೋಲಾಹಲವನ್ನೆಬ್ಬಿಸಿ, ಸಜ್ಜನರಿಗೂ ದೇವತೆಗಳಿಗೂ ಬಾಧೆ ಕೊಡುತ್ತಿದ್ದಾನೆ. ಅವನ ಉಪಟಳದಿಂದ ಬೆಂದು ದೇವತೆಗಳೆಲ್ಲ, ಬ್ರಹ್ಮದೇವನಲ್ಲಿಗೆ ಹೋಗಿ ಅವನ ನಿಗ್ರಹಕ್ಕಾಗಿ ಬೇಡಿದರು.

ಕಾ:- ಹೌದು ! ಇಂಥ ದೈತ್ಯನ ಸಂಹಾರ ಇನ್ನುವರೆಗೆ ಆಗದೆ ಇರುವುದರಿಂದ ಸಜ್ಜನರಿಗೆ ಅದೆಂತು ದುಃಖವೋ ! ಬಹ್ಮ ದೇವರು ಏನು ಹೇಳಿದರು?

ಗು:- ತಾರಕಾಸುರನು ಬಹ್ಮದೇವರನ್ನು ಕುರಿತು ತಪಸ್ಸು ಮಾಡಿ ಯಾರಿಂದಲೂ ಮರಣ ಬರದಂತೆ ವರಗಡೆದಿದ್ದಾನಂತೆ. ಆದ್ದರಿಂದ ಬ್ರಹ್ಮದೇವರು ಪರಮಾತ್ಮನಲ್ಲಿಗೆ ಸಲಹೆ ಪಡೆಯಲು ಹೋದರು.

ಕಾ:- ಹೌದು. ಆತನಿಂದಲೇ ಸಮಸ್ಯೆ ಬಗೆಹರಿಯತಕ್ಕದ್ದು.

ಗು:- ಶಿವನ ಪುತ್ರನ ಹೊರತು ಇತರರಿಂದ ಸಾವು ಬರಬಾರದು ಎಂಬದಿರುವ ಕಾರಣ. ಶಿವನಿಗೆ ಮಕ್ಕಳಾಗುವಂತೆ ಏರ್ಪಾಟು ಮಾಡಿ ಆ ಮಗನಿಂದ ತಾರಕಾಸುರನನ್ನು ಸಂಹಾರ ಮಾಡಿಸುವುದೆಂದು ಪರಮಾತ್ಮನು ಆಜ್ಞಾಪಿಸಿದ್ದಾನೆ.

ಕಾ:- ಇದರಲ್ಲಿ ನನ್ನ ಪಾತ್ರಯಾವುದು ?

ಗುರು:- ದಕ್ಷ ಪ್ರಜೇಶ್ವರನ ಯಾಗದಲ್ಲಿ ತನ್ನ ತಂದೆಯಿಂದ ಅವಮಾನಿತಳಾಗಿ ಸತೀದೇವಿಯು ತನ್ನ ತನುವನ್ನು ತ್ಯಜಿಸಿದ ಸಂಗತಿ ನಿನಗೆ ಗೊತ್ತಿದೆ ತಾನೆ !

ಕಾ:- ಹೌದು ! ಈಗ ಆಕೆ ಹಿಮಗಿರಿಯಲ್ಲಿ ಅವತರಿಸಿ ಪಾರ್ವತಿಯ ಹೆಸರಿನಿಂದ ಪ್ರಸಿದ್ಧವಾಗಿದ್ದಾಳೆ.

ಗುರು:- ಈ ಜನ್ಮದಲ್ಲಿಯೂ ಶಿವನೇ ಗಂಡನಾಗಬೇಕೆಂದು ಸದಾ ಧ್ಯಾನ ಮಾಡಿದಳು. ಈಗಲೂ ಧ್ಯಾನಿಸುತ್ತಿದ್ದಾಳೆ.

ಕಾ:- ಆದರೆ ಶಂಕರಾ ?

ಗುರು:- ಆತನೂ ಸತೀದೇವಿಯ ವಿಯೋಗದಿಂದ ವೈರಾಗ್ಯಶಾಲಿಯಾಗಿ ತನ್ನ ಪರಿವಾರದೊಡನೆ ತುಹಿನಗಿರಿಯ ಸಮೀಪದ ಅರಣ್ಯದಲ್ಲಿ ಉಗ್ರವಾದ ತಪಸ್ಸನ್ನಾಚರಿಸುತ್ತಿರುವನು. ಅಲ್ಲಿ ಒಂದು ದೊಡ್ಡ ಆಶ್ರಮವೇ ಬೆಳದಿದೆ. ಋಷಿ ಮುನಿಗಳು ಬೀಡು ಬಿಟ್ಟಿದ್ದಾರೆ. ಪಾರ್ವತಿಗೆ ಸಂಗತಿ ತಿಳಿದು ತಾನೂ ಅಲ್ಲಿಗೆ ಬಂದು ಆತನ ಸೇವೆಯಲ್ಲಿ ಇದ್ದಾಳೆ. ಆಕೆಯೂ ಕಂದಮೂಲಾದಿಗಳನ್ನೇ ತಿಂದು ಕಂದುಗೊರಳನಂಘ್ರಿ ಸೇವೆಯ ತಪದಲ್ಲಿ ನಿರತಳಾಗಿದ್ದಾಳೆ.

ಕಾ:- ಮಹಾದೇವ ಪಾರ್ವತಿದೇವಿ ಇಬ್ಬರೂ ಉಗ್ರತಪಸ್ಸಿನಲ್ಲಿ ಇದ್ದಾರೆ. ಅವರೇ ಧನ್ಯರು.

ಗುರು:- ಅದು ನಿಜ. ಆದರೀಗ ಲೋಕಕಲ್ಯಾಣಕ್ಕಾಗಿ ಅವರಿಬ್ಬರಿಂದ ಪುತ್ರಜನಿಸಬೇಕಾಗಿದೆಯಲ್ಲ. ಅದಕ್ಕಾಗಿ ಅವರು ತಪವ ಬಿಟ್ಟು ಸಂತಾನವೃತ್ತಿಯಲ್ಲಿ ತೊಡಗಿಸುವಂತೆ ಮಾಡುವ ಕೆಲಸ ನಿನ್ನದಾಗಿದೆ.

ಕಾ:- ಗುರುದೇವ. ಗುರುದೇವ. ' ಇದೇನು ನನ್ನ ಸತ್ವಪರೀಕ್ಷೆ ನಡೆಯುವುದೆ ಹೇಗೆ ? ನಾನೆತ್ತ ಆ ಮಹಾದೇವನೆತ್ತ. ತನಗಿಂತ ಬಲ್ಲಿದರೊಡನೆ ಕಾದಿ ಗೆಲ ಉಂಟೆ. ? ಕುರಿಯೆತ್ತ ತೋಳನೆತ್ತ ? ಹರಿಣವೆತ್ತ ವ್ಯಾಘ್ರವೆತ್ತ ? ಕುರಿಗಳೆತ್ತ ಸಿಂಗವೆತ್ತ ? ನಾಗಭೂಷಣನ ಮೇಲೆ ನಾನು ದಾಳಿಯನ್ನು ಮಾಡಿದೆನಾದರೆ ಅತನ ಕೋಪಕ್ಕೆ ಗುರಿಯಾಗಿ ವ್ಯರ್ಥ ಕೆಟ್ಟೇನು? ಮತ್ತೇನಾದರೂ ಆಜ್ಞಾಪಿಸಿ ದೇವ.

ಗುರು:- ಕುಂಜಬಾಣ, ನಿನ್ನ ಪಂಚಬಾಣಗಳ ಬಾಧೆಗೆ ಅಳುಕಿ ಹಿಂದೆ ಬ್ರಹ್ಮ, ವಿಷ್ಣು, ಮಹೇಶ್ವರ ಎಲ್ಲರೂ ಸತಿಯ ಸಂಗಡ ಪಂಜರದಲ್ಲಿ

ಬೇಳಲಿಲ್ಲವೆ? ಅಳುಕಬೇಡ. ನಡೆ ಮದನನು ಜಯಿಸಲು. ಮಡಿದರಾದರೂ ಏನು ? ಸುರರ ಎಡರ ಕಳೆಯಲು ಮಾಡಿದ ನಿನ್ನ ಈ ತ್ಯಾಗ ಆಚಂದ್ರಾರ್ಕವಾಗಿ ಉಳಿದೀತು.

ಕಾ:- ದೇವ ದಿಂಙ್ಮೂಢನಾಗಿದೇನೆ. ದೇಹವೇ ಎಲ್ಲಕ್ಕೂ ಸಾಧನ. ಅದನ್ನು ಕಳೆದುಕೊಳ್ಳಲಾರೆ.

ಗು:- ಮದನ! ನೀನು ಮದಡನಲ್ಲ. ತಿಳಿದವ. ತ್ಯಾಗ ಮಾಡುವ ಔತನ ಮನೆತನಕ ಬಂದಾಗ ಉತ್ಸಾಹದಿಂದ ಮುಂಬರುವ ಸಾಹಸಿ ನೀನು. ಜಗದಲ್ಲಿ ದೇಹ ಶಾಶ್ವತವಲ್ಲ. ಇದು ಹೋದರೆ ಮತ್ತೊಂದು ಬಂದೀತು. ಉಳಿವುದು ನಮ್ಮ ಕರ್ಮಗಳ ಫಲ. ಧೃಡತೆ ಬರಲಿ ನಿನಗೆ. ನೀರ ಬೊಬ್ಬಿಳಿಯಂತೆ ತೋರುತಲಿಪ್ಪ ದೇಹದ ಅಸಾರವನ್ನು ತಿಳಿದಾತ ನೀನು. ಅರೆ ಮರೆಯ ಮಾಡದೆ ಹೋಗಿ ಹರನ ಜಯಿಸು. ಸುರರಿಗೆ ಹಿತವ ಮಾಡು.

ಕಾ:- ಗುರುದೇವ! ನನಗೆ ಆ ಶಕ್ತಿಯಿದೆಯೆ?

ಗು:- ನೀನಾಗಲೇ ಹೇಳಲಿಲ್ಲವೆ? ಶಕ್ತಿಯೆಲ್ಲವೂ ಪರಮಾತ್ಮನದು ಎಂದು. ನಾವೆಲ್ಲ ನಿಮಿತ್ತ ಮಾತ್ರರು. ಆತನೇ ಆಣತಿ ಇತ್ತಿರುವಾಗ ಆತನದೇಶಕ್ತಿ ಎಲ್ಲೆಡೆಗೂ ಕೆಲಸ ಮಾಡುತ್ತದೆಂಬುದನ್ನು ನೀನು ತಿಳಿದಿರುವಾಗ, ಅಲ್ಲದೆ ಆತನ ಸಂಕಲ್ಪವೇ ಇರುವಾಗ, ನೀನು ಹಿಂಜರಿಯಲಾರೆ. ನಡೆ ಅಣಿಯಾಗು. ಭಗವಂತನ ಸೇವೆ ಕಾದಿದೆ ಏಳು.

ಕಾ:- ಗುರುವರಾ! ನನ್ನ ಮೂಢ ಮತಿಯನು ತಿದ್ದಿ ಕರ್ತವ್ಯ ದಕ್ಷನನ್ನಾಗಿ ಮಾಡಿದ ನಿಮ್ಮ ಉಪಕಾರವನ್ನು ನಾನು ತೀರಿಸಲಾರೆ ಪರಮಾತ್ಮನ ಆಜ್ಞೆಯಂತೆ ಕಾರ್ಯನಿರ್ವಹಿಸಲು ನನಗೆ ಆಶೀರ್ವಾದಿಸಿ.

ಗು:- ನಿನಗೆ ಮಂಗಳವಕ್ಕು.

ಕಾ:- ಗುರುದೇವ ಒಳಗೆ ದಯಮಾಡಿಸಬೇಕು. ಪೂಜೆಗೆ ಅಣಿಯಾಗಿದೆ. (ಗುರುಗಳು ಒಳಗೆ ಹೋಗುವರು.)

ರತಿ:- (ಪ್ರವೇಶಿಸಿ) ಗುರುಗಳ ಪೂಜೆಗೆ ಅಣಿಯಾಗಿದೆ. ನೀವೂ ಬನ್ನಿರಿ.

ಕಾ:- ಹೌದು ಬರುತ್ತೇನೆ.

ರತಿ:- ತಾವು ಈ ರೀತಿಯಾದ ವಚನವೇಕೆ ಕೊಟ್ಟಿರಿ.

ಕಾ:- ಅದು ಕರ್ತವ್ಯ.

ರತಿ:- ದೇವಾ ನಾನು ಸ್ತ್ರೀ. ಹೆಚ್ಚಿಗೆ ಹೇಳಲಾರೆ. ನನ್ನ ಸೌಭಾಗ್ಯ ದತ್ತ ಲಕ್ಷ್ಯ ಕೊಟ್ಟಾದರೂ ಉರಿಗಣ್ಣನೆದುರಿಸಲು ಹೋಗಬೇಡಿರಿ.

ಕಾ:- ಮಾತು ಹೋಗಿದೆ ದೇವಿ. ಇನ್ನು ತಿರುಗುವಂತಿಲ್ಲ.

ರತಿ:- ಪ್ರಭು. (ದುಃಖಪೂರಿತಳಾಗಿ) ನಿನ್ನ ಚಿತ್ತ. ನಿನಗೆ ಉತ್ತರೋತ್ತರವಾದ ಜಯ ದೊರಕಲೆಂದು ಪ್ರಾರ್ಥಿಸುವುದರ ಹೊರತು ನನ್ನ ಕೈಯಲ್ಲಿ ಇನ್ನೇನಿದೆ.

ಕಾ:- ಹೌದು ದೇವಿ. ಹಾಗೇ ಪ್ರಾರ್ಥಿಸು. ನಡೆ. ಗುರುಗಳ ಪೂಜೆಗಾಗಿ ಹೋಗೋಣ.

೨

[ಹಿಮಗಿರಿಯ ತಲ್ಪದಲ್ಲಿರುವ ವನ. ಮಹಾದೇವನು ತಪವ ಗೈಯುತ್ತಿರುವ ಆಶ್ರಮದ ಒಂದು ಭಾಗ. ವಸಂತಮಾಸದ ಆರಂಭ. ಕೋಕಿಲೆಯ ಸುಸ್ವರ]

ಪಾರ್ವತಿ:- [ಸ್ವಗತ] ಎಲೈ ಕೋಕಿಲೆಯೆ! ನೀನೂ ನನ್ನಂತೆ ವಿರಹಿಯಾಗಿ ಬಳಲುತ್ತಿರುವಿಯೆ? ಅಲ್ಲ. ಅಲ್ಲ. ನಾನು ವಿರಹಿ ಎಂದು ಹೇಳಿಕೊಳ್ಳಲು ಬರುವಂತಿಲ್ಲ. ಎನ್ನ ಇನಿಯನ ಸನ್ನಿಧಿಯಲ್ಲೇ ಇದ್ದೇನೆ. ಆತನ ಉಗ್ರ ತಪಃಪ್ರಭಾವದಿಂದ ಅನೇಕಾನೇಕ ಋಷಿಗಳೂ ಬಂದು ನೆಲಿಸಿರುವ ಈ ಪವಿತ್ರ ಆಶ್ರಮದಲ್ಲಿದ್ದೇನೆ. ಎನ್ನಿನಿಯನನ್ನು ನಿತ್ಯವೂ ಕಂಗಳಿಂದ ನೋಡುತ್ತೇನೆ. ನೋಡಿ ಮನದಲ್ಲಿ ಇನಿಯನನ್ನು ಬಾಹುಗಳಿಂದ ಅಪ್ಪುತ್ತೇನೆ. ಸರ್ವಸ್ವವನ್ನೂ ಆತನಿಗೆ ಅರ್ಪಿಸುತ್ತೇನೆ. ಮನೋರಾಜ್ಯದಲ್ಲಿ ಎನಗೆ ಎಡೆತಡೆಯೇನಿದೆ? ಬಾಹ್ಯದಲ್ಲಿ ನಾನೂ ಓರ್ವ ತಪಸ್ವಿನಿಯಂತೆ ಕಂದಮೂಲಗಳನ್ನೇ ಭಕ್ಷಿಸಿ ನಾನು

ಯಮನಿಯಮಗಳನ್ನು ಪಾಲಿಸುತ್ತಿದ್ದೇನೆ. ಎನ್ನಿನಿಯ ತಪಸ್ಸಿನಲ್ಲಿಯೇ ಮಗ್ನವಾಗಿದ್ದಾನೆ. ಎಂದಿಗೆ ಆ ತಪಸ್ಸು ಮುಗಿಯುವುದೋ ಎಂದು ಆತ ನನ್ನನ್ನು ತನ್ನ ವಕ್ಷಸ್ಥಳದಲ್ಲಿ ಕುಳ್ಳರಿಸಿಕೊಳ್ಳುವನೋ ತಿಳಿಯದು. ಎಲೈ ಕೋಕಿಲೆಯೆ! ಎಲೈ ಮಂದಮಾರುತನೆ! ನಿಮಗೆ ಗೊತ್ತಿದೆಯೆ? ಗೊತ್ತಿದ್ದರೆ ಹೇಳಿ? ಇಲ್ಲವೆ? ಆದರೇನು? ನಾನು ಸದಾ ನನ್ನ ಮನ ಮಂದಿರದಲ್ಲಿ ಆತನ ಸನ್ನಿಧಿಯಲ್ಲಿ ಸರಸವಾಡುತ್ತೇನೆ. ಅದೋ ಆ ದಿವ್ಯ ಮೂರ್ತಿ. ಅದೆಂಥ ಮೋಹಕ ಮೂರ್ತಿ. ಇದೇನು ನನ್ನ ಸೆರಗು ತಾನೇ ಹಾರಿಹೋಗುತ್ತಿದೆಯೆಲ್ಲ. ಏನಿದು? ಯಾಕೆ? ಜೀಯಾ! ಪ್ರಸನ್ನನಾಗು ವಿಯೊ? ಒಡಯ! ಪ್ರೇಮ ಪುತ್ಥಳಿಯೆ? ಮಹಾದೇವನೆ! ಶಂಕರನೆ! ಎನ್ನ ಮನದೊಡೆಯನೆ!............

ನಂದಿ:– [ಪ್ರವೇಶಿಸಿ] ತಾಯೆ! ಕ್ಷಮಿಸಿ............ ತಾಯೆ!

ಪಾರ್ವತಿ:- ಹೌದು! ಒಡಯ! ನನ್ನ ಸರ್ವಾಂಗವೂ ನಿನಗಾಗಿ, ನಿನಗಾಗಿಅರ್ಪಿತವಾಗಿದೆ. ಅದು ನೋಡಿದಿಯಾ ವಸಂತ ಬಂದಿದ್ದಾನೆ. ಸೊಗವ ತಂದಿದಾನೆ.

ನಂದಿ:- ತಾಯೆ! ನಾನು, ನಾನು ನಿನ್ನ ಸೇವಕ ನಂದಿ ಬಂದಿದ್ದೆನೆ.

ಪಾರ್ವತಿ:- ಆಂ! ಆಂ! ಯಾರು. ಅಯ್ಯೋ (ಸೆರಗನ್ನು ಸರಿಪಡಿಸಿಕೊಂಡು) ನೀನು ಬಾ ವೃಷಭರಾಜ ಬಾ. ನಿನಗೇನಾದರೂ ಗೊತ್ತಿದೆಯೇ? ಕೈಲಾಸಪತಿಯ ತಪಸ್ಸು ಎಂದು ಮುಗಿಯುತ್ತದೆ?

ನಂದಿ:- ತಾಯೆ! ಈ ವಸಂತಮಾಸ. ಈಸಲ ಯಾಕೋ ತೀವ್ರವೇ ಬಂದುಬಿಟ್ಟಿದೆ. ಅಷ್ಟೇ ಅಲ್ಲ ಬಹು ಉಗ್ರವಾಗಿ ಬಂದುಬಿಟ್ಟಿದೆ.

ಪಾರ್ವತಿ:- ನನ್ನ ಪ್ರಶ್ನೆಗೆ ಉತ್ತರ ಕೊಡು.

ನಂದಿ:- ಜಗದಂಬೆ, ನೀನು ಎಲ್ಲ ಬಲ್ಲವಳು. ಏನ ಹೇಳಲಿ! ವಸಂತನು ಬಹು ಅನ್ಯಾಯ ಮಾಡುತ್ತಿದ್ದಾನೆ. ವಸಂತನು ಕಾಮದೇವನ ದೂತ. ಕಾಮದೇವನಲ್ಲಿಗೆ ದೂರು ಒಯ್ಯಬೇಕೆಂದಿದ್ದೇನೆ.

ಪಾ:- ಏಕೆ? ಏನಾಯಿತು? ವಸಂತ ಜಗಕೆ ಸೊಗವ ನೀಡುತ್ತಾನೆ. ಕೋಕಿಲೆಗೆ ಸುಸ್ವರ ಕೊಟ್ಟು ಹಾಡಿಸುತ್ತಾನೆ. ಗಿಡಬಳ್ಳಿಗಳನ್ನು ಚಿಗುರಿಸುತ್ತಾನೆ. ಮಂದ ಮಾರುತನೊಡನೆ ಪ್ರೇಮದ ಒಸಗೆಯನ್ನು ಬೀರಿಸುತ್ತಾನೆ. ಅಗಲಿದ ವನಗಳನ್ನು ಕೂಡಿಸುತ್ತಾನೆ. ವಿರಹಿಗಳ ಮಿಲನಕ್ಕೆ ಕಾರಣವಾಗುತ್ತಾನೆ.

ನಂದಿ:- ಹಾಯ್! ಏನಿದು ವಿಚಿತ್ರ. ಪಾರ್ವತಿದೇವಿಯೆ! ನೀನು ಕೂಡ ವಸಂತನ ಜಾಲಕ್ಕೆ ಅರ್ಥಮಾಡದೆ ಹೋದರೆ ನಮ್ಮಂಥವರ ಪಾಡೇನು? ಅಂತೇ ಋಷಿಗಳೆಲ್ಲ ತಮ್ಮನ್ನು ತಾವೇ ಮರೆತಿದ್ದಾರೆ.

ಪಾ:- ಯಾಕೆ ಋಷಿಗಳೆಲ್ಲ ಕ್ಷೇಮ ತಾನೆ?

ನಂದಿ:- ಏನು ಹೇಳಲಿ ದೇವಿ? ಕ್ಷೇಮವೆಲ್ಲಿಯದು? ತಮ್ಮ ತಪಸ್ಸನ್ನೆಲ್ಲ ಹಾಳುಮಾಡಿಕೊಳ್ಳುತ್ತಿದ್ದಾರೆ. ಈ ವಸಂತಮಾಸ ಬಂದುದೇ ಕೇಡಾಗಿದೆ. ತಮ್ಮ ತಮ್ಮ ರಮಣಿಯರ ಸಂಗದಲ್ಲಿಯೋೀರತರಾಗಿ ನಿತ್ಯ ಕರ್ಮಗಳನ್ನೂ, ಯಜ್ಞಯಾಗಾದಿಗಳನ್ನೂ, ಅಗ್ನಿ ಹೋತ್ರವನ್ನೂ ಬಿಟ್ಟಿದ್ದಾರೆ. ಋಷಿ ಕುಮಾರರು ವಿದ್ಯಾಭ್ಯಾಸವನ್ನೇ ಬಿಟ್ಟು ಹುಚ್ಚರಂತೆ ಅಲೆಯುತ್ತಿದ್ದಾರೆ.

ಪಾ:- ಅದೇಕೆ? ವೃಷಭರಾಜ ಹೀಗೆ! ಆಗಲಿ ಇಷ್ಟಾದರೂ ಎನ್ನೊಡೆಯ ಶಂಕರದೇವ ಮಾತ್ರ ಚಲಿಸದೆ ಅಚಲನಾಗಿ ಧ್ಯಾನಸ್ಥನಾಗಿಯೇ ಇದ್ದಾನಲ್ಲವೆ.

ನಂ:- ದೇವಿ ನಿನಗಾಗಿ ಎನ್ನಲ್ಲಿ ಸಹಾನುಭೂತಿಯಿದೆ. ಆದರೆ ಎನ್ನೊಡೆಯ ಕೈಲಾಸಾಧಿಪತಿಯ ಉಗ್ರ ತಪಸ್ಸು ಯಾರಿಂದಲೂ ಭಂಗವಾಗಲಾರದು.

ಪಾ:- ಆದರೀ ಋಷಿಗಳು ಹೀಗೆ ಅಡ್ಡದಾರಿಗೆ ಹೋದರೆ ಹೇಗೆ? ಇವರನ್ನು ತಿದ್ದಲೋಸುಗವಾದರೂ ತಪಸ್ಸನ್ನು ಉಪರಮಿಸ ಬೇಡವೆ?

ನಂ:- ದೇವಿ! ನೀನು ಕೂಡ ವಸಂತನನ್ನು ಹೊಗಳಿದೆ. ನೀನು ಸಹಕರಿಸಿ ಆಶೀರ್ವಾದಿಸಿದರೆ ಸಾಕು, ಈ ವಸಂತನನ್ನೇ ಏಕೆ, ಅವನೊಡೆಯ

ಕಾಮನನ್ನೇ ಸೋಲಿಸಿ, ಪುನಃ ಎಂದಿಗೂ ಈ ಆಶ್ರಮಕ್ಕೆ ವಸಂತನನ್ನು ಬಾರದಂತೆ ಮಾಡಿಯೇನು? ನಿನ್ನ ಮತ್ತು ನಾಗಶೇಷನ ಆಶೀರ್ವಾದದಿಂದ ಈ ಸೇವಕನಲ್ಲಿ ಅಷ್ಟು ಶಕ್ತಿಯಿದೆ.

ಪಾ:- ಅದೇಕೆ? ನೀನು ಹೀಗೆ ವಸಂತನ ಮೇಲೆ ಕೋಪಿಸುತ್ತಿರುವುದು? ಹಾಂ! ವಸಂತನ ಆಗಮನದಿಂದಲೇ ಋಷಿಗಳೆಲ್ಲ ಹೀಗಾದರೆಂದು ನಿನ್ನ ಗ್ರಹಿಕೆ ಇರಬಹುದು. ಆದರೆ........

ನಂ:- ನೀನು ಆಶೀರ್ವದಿಸು ಸಾಕು. ನಾನೀಗಲೇ ಹೋಗುವೆ. ಅವನನ್ನು ಜಯಿಸುವೆ. ಆಗ ಋಷಿಗಳಿಗೆ ತಮ್ಮ ನಿತ್ಯಕಾರ್ಯ ನಿರ್ವಹಣೆಯಲ್ಲಿ ತೊಂದರೆಯಾಗದು.

ಪಾ:- ನಿನ್ನ ದೃಷ್ಟಿಯಲ್ಲಿ ವಸಂತ, ಅಷ್ಟು ದುಷ್ಟನಾಗಿ ಕಾಣುತ್ತಿದ್ದಾನೆಯೆ?

ನಂ: ಅಲ್ಲವೆ ಮತ್ತೆ?

ಪಾ:- ಆದರೆ ಆತನೇನು ಮಾಡಿಯಾನು? ತನ್ನೊಡೆಯನ ಆಜ್ಞೆಯಂತೆ ನಡೆಯುವನು.

ನಂ:- ಹಾಗಾದರೆ ಅವನೊಡಯ ಕಾಮನ ಮೇಲೆಯೇ ದಾಳಿ ಮಾಡಿಬರುವೆ ಅಪ್ಪಣೆಕೊಡು.

ಕಾ:- (ಪ್ರವೇಶಿಸಿ) ವೃಷಭರಾಜ. ನಿನಗೆ ಬರುವ ತೊಂದರೆಯೇಕೆ? ನಾನೇ ಬಂದಿದ್ದೇನೆ. ದೇವಿಗೆ ಅನಂತ ಪ್ರಮಾಣಗಳು.

ಪಾ:- ಬಾ, ಕಾಮದೇವ. ಇತ್ತಕಡೆಗೆ ಬಂದ ಕಾರಣವೇನು?

ನಂ:- ಕಾರಣ ಬೇರೆ ಕೇಳಬೇಕೆ? ನಮ್ಮ ಆಶ್ರಮವನ್ನೆಲ್ಲ ಕೆಡಿಸಲೋಸುಗ.

ಕಾ:- ವೃಷಭರಾಜ. ದೇವತೆಗಳ ಆಶ್ರಮಗಳನ್ನು ಕೆಡಿಸುವದು ದೈತ್ಯರದು. ನನ್ನ ನಿನ್ನ ಕಾರ್ಯ ದೇವತೆಗಳ ಅಭ್ಯುದಯವನ್ನು ಕೋರುವುದು.

ನಂ:- ಹಾಗಿದ್ದರೆ, ನಮ್ಮ ಆಶ್ರಮಕ್ಕೆ ನೀನು ದಾಳಿಯಿಟ್ಟಿರುವುದೇಕೆ?

ಪಾ:- ದಾಳಿಯಿಟ್ಟಿದ್ದಾನೆಯೆ?

ಕಾ:- ತಾಯಿ? ತಾರಕಾಸುರನು ಮಹಾ ಉನ್ಮತ್ತನಾಗಿ ದೇವತೆಗಳನ್ನೂ, ಸಜ್ಜನರನ್ನೂ ಕಾಡಿಸುತ್ತ ಎಲ್ಲೆಡೆಗೂ ಹಾ ಹಾಕಾರವನ್ನೆಬ್ಬಿಸಿದ್ದಾನೆ. ಅವನ ಸಂಹಾರವಾಗಬೇಕಾಗಿದೆ. ಅವನ ಸಂಹಾರವು ಶಂಕರನ ಪುತ್ರನಿಂದಲೇ ಆಗಬೇಕೆಂಬ ವರವಿದೆ.

ನಂ:- ಅಂದರೇನರ್ಥ. ಕೈಲಾಸಪತಿಯು ತನ್ನ ತಪಸ್ಸನ್ನು ಕೆಡಿಸಿಕೊಂಡು ಪುತ್ರನನ್ನು ಪಡೆಯಬೇಕೆ ? ಇಷ್ಟು ಜನ ಶೂರ ದೇವತೆಗಳಿದ್ದೂ ದಂಡವಾಯಿತೆ?

ಪಾ:– ಮೊದಲು ಆತನು ಹೇಳುವುದನ್ನು ಕೇಳಿಕೊ.

ನಂ:- ತಾಯಿ ! ನೀನೂ ಆತನಿಗೆ ಬೆಂಬಲವಿತ್ತರೆ ನಾನೊಬ್ಬನೆ ಎದುರಿಸುವೆ.

ಕಾ:- ಇದರಲ್ಲಿ ಎದುರಿಸುವ ಮಾತಿಲ್ಲ. ಕರ್ತವ್ಯದ ಕರೆ ಇದೆ. ದೇವತೆಗಳೆಲ್ಲರ ಹಿತದ ದೃಷ್ಟಿ ಇದೆ.

ನಂ:- ಆದೇನೆ ಇರಲಿ. ನಾಗಭೂಷಣನ ತಪಸ್ಸನ್ನು ಭಂಗವಾಗಗೊಡಲಾರೆ. ತಾಯಿ ಅಪ್ಪಣೆಕೊಡು ಹೊತ್ತಾಯಿತು. ನಾನು ದೇವನೆಡೆಗೆ ಹೋಗಿ ಕಾವಲಿರುವೆ. ಪ್ರಣಾಮಗಳು (ಹೋಗುವನು.)

ಪಾ:- ನೀನು ಮಹಾ ಸಾಹಸಕ್ಕೆ ಕೈ ಹಾಕಿರುವಿ.

ಕಾ:- ಕರ್ತವ್ಯ.

ಪಾ:- ಮಗನೆ, ಜಲಜ, ಮಲ್ಲಿಗಿ, ಚೂತ, ನೈದಿಲೆ, ಅಶೋಕ ಚೆಲುಲುವಾದ ಪಂಚ ಬಾಣಗಳನ್ನು, ಕಬ್ಬು ಬಿಲ್ಲನ್ನು ಹಿಡಿದು ಹೊರಟಿರುವೆ. ಆದರೆ ಆನೆಯು ಕೊಬ್ಬಿ ಶಿಲೆಗೆ ಹಾಯ್ದಂತೆ ಆದೀತು. ಬಂಡಹಾದಿ ಹಿಡಿದು ತಿರುಗಿ ಹೋಗು.

ಕಾ:- ಅಳುಕದಿರು ತಾಯಿ ! ಎನ್ನ ಒಂದೇ ಬಾಣ ಸಾಕು. ಗಾಢ ತಪದಲ್ಲಿರುವ ಹರನ ಗೂಢ ಹೃದಯದಲ್ಲಿ ಗೊಂದಲವನ್ನೆಬ್ಬಿಸಿ, ನಿನ್ನನ್ನು ಕೂಡಿಸಬಲ್ಲದು. ನೀನು ಅಂಜದಿರು, ತೋರು ಶಂಕರನನು.

ಪಾ:- ನಿನ್ನಿಚ್ಛೆ ಪೂ ಬಾಣಯ್ಯ! ನಿನ್ನ ಪುಣ್ಯದಿಂದ ನನ್ನ ಮನೋರಥವೂ ಪೂರ್ಣವಾದರೆ,............

ಕಾ:- ನೀನು ನಿಶ್ಚಿಂತಳಾಗಿರು ದೇವಿ. ಅದೆಲ್ಲವೂ ನನ್ನನ್ನು ಕೂಡಿತು. ನಿನಗೆ ಪುತ್ರೋತ್ಸವವಾಗಲೆಂಬುದೇ ಎನ್ನ ಸದುದ್ದೇಶ. ಶ್ರೀ ಶಂಕರನೆಡೆಗೆ ಹೋಗುವಾ ನಡೆ.

ಪಾ:- ಆಗಲಿ! ನಡೆ. ಆದರೆ ನನಗೇಕೋ ಭಯವಾಗುತ್ತಿದೆ. ಕಾಮದೇವಾ, ನಾನು ನನ್ನ ಸ್ವಾರ್ಥಕ್ಕಾಗಿ ತಪೋಭಂಗ ಮಾಡಿದ ಪಾಪಕ್ಕೆ ಗುರಿಯಾಗಿ ಎನ್ನ ಇನಿಯನ ಆಗ್ರಹಕ್ಕೆ ತುತ್ತಾದರೆ! ಬೇಡ. ಬೇಡ. ನಿಲ್ಲು.

ಕಾ:- ಬೆದರಿದರು ತಾಯಿ! ಇದರಲ್ಲಿ ನಿನ್ನ ತಪ್ಪೇ ಇಲ್ಲ. ಲೋಕವಂದ್ಯಳು ನೀನು. ವಿಕಾರಾತೀತಳು. ಕೇವಲ ದೇವತೆಗಳ ಹಿತಕ್ಕೋಸ್ಕರ ನಾನೂ ಈ ಸಾಹಸ ಮಾಡುತ್ತಿದ್ದೇನೆ. ಇದು ತಪ್ಪೇ ಆಗಿದ್ದರೆ ಅದರ ಹೊಣೆಯೆಲ್ಲವೂ ನನ್ನ ಮೇಲಿದೆ. ನೀನು ಸದಾ ಪವಿತ್ರಳು. ತಾಯೆ! ನಡೆ ಹೋಗೋಣ.

( ಹೋಗುವರು )

೩

[ಆಶ್ರಮದ ಇನ್ನೊಂದು ಭಾಗ. ದೊಡ್ಡ ಆಲದ ಮರದ ಬುಡದಲ್ಲಿ ಧ್ಯಾನಸ್ಥನಾಗಿ ಕುಳಿತಿರುವ ಶಂಕರದೇವ. ಕೆಳಗೆ ಅತ್ತಿಂದಿತ್ತ ನಂದಿ ತಿರುಗುತ್ತ ಕಾವಲಾಗಿದ್ದಾನೆ. ದೂರದಲ್ಲಿ ಪಾರ್ವತಿ ಕಾಮದೇವರ ಪ್ರವೇಶ. ನಂದಿ ಇವರನ್ನು ನೋಡಿಲ್ಲ.]

ಪಾ:- ಅದೋ ನೋಡು! ಅಲ್ಲಿ. ಪದ್ಮಾಸೀನರಾಗಿ ಶ್ವಾಸಬಲಿಸಿ ಯೋಗದಿಂದ ನಾಸಿಕಾಗ್ರದಲ್ಲಿ ದೃಷ್ಟಿಯಿಟ್ಟು, ಚಿತ್ತದಲ್ಲಿ ಧ್ಯಾನವನ್ನೇ ನಡೆಸುತ್ತಿರುವ ಎನ್ನೊಡೆಯ ನಾಗಭೂಷಣನು ಅದೆಷ್ಟು ಗಂಭೀರವಾದ ಶಾಂತಮೂರ್ತಿಯಾಗಿ ಕಂಗೊಳಿಸುತ್ತಾನೆ. (ದಂಡವತ್ ಪ್ರಣಾಮ ಮಾಡುವಳು)

ಕಾ:- ಧನ್ಯ ತಾಯೆ! (ಕಾಮನೂ ಶಂಕರನಿಗೆ ದಂಡವತ್ ಪ್ರಣಾಮ ಮಾಡುವನು. (ಬಿಲ್ಲಿಗೆ ಬಾಣ ಹೂಡಿ) ಇದೋ ತಾಯೆ! ಪೂಶರಾಸನಕ್ಕೆ ಹೆದೆಯ ಬಿಗಿದು ಹೊಡೆವೆ. ಇದೋ ಹೋಯಿತು.

[ಝೇಂಕಾರ ಸಪ್ಪಳ. ಸಮುದ್ರದಲ್ಲಿ ಉಕ್ಕೇರಿದ ಧ್ವನಿ. ಬಿರುಗಾಳಿಯು, ಗುಡುಗಿನ ಕೋಲಾಹಲ]

ನಂದಿ:- ಏನಿದು! ಅಧ್ಭುತ ಧ್ವನಿ. ಅಯ್ಯೋ ಕಾಮನು ದಾಳಿ ಮಾಡಿದನೆ? ಓಂ ಶಂಕರ, ಜಯ ಶಂಕರ, ಜಯ ಜಯ ಶಂಕರ! ನಿತ್ಯ ನಿರಂಜನ, ನಿರಾಮಯ, ದೇವನೆ! ಕಾಮನ ಉಪಟಳ ಎದುರಿಸಲಾರೆನೊ ಶಕ್ತನೆ, ಆಗದೆ ತೊಳಲುತ್ತಿರುವೆನು!

ದೇವಾ! ಏನಿದು. ಏನೋ ಹೇಳುತ್ತಿರುವಿಯಲ್ಲ. ನಿನ್ನ ಹೃದಯವು ಚಲಿಸುತ್ತಿದೆಯಲ್ಲ!

ಶಂಕರ:- (ಸ್ವಗತ) ಏನಿದು? ಯಾರು ನನ್ನನ್ನು ಕೆಣಕುತ್ತಿರುವುದು? ಚಿತ್ತವೇಕೆ ಚಲಿಸಿತು. ಹಾಯ್! ಅಂತರಾತ್ಮನ ಮೂರ್ತಿ ಕಣ್ಮರೆಯಾಯಿತಲ್ಲ! ಏನಿದು? ಯಾರದು? ಓಹೋ ಕಾಮನ ಆಲವೇನು? ಪ್ರಾಜ್ಞ, ತೈಜಸರೂ ಮರೆಯಾಗಿ ವಿಶ್ವನ ಕಾರ್ಯವೇ ಆರಂಭವಾಯಿತಲ್ಲ. ಯಾದು? ಯಾರು? ಎನ್ನ ಕಿಡಿಗಣ್ಣು ಕಾಣುವುದೇನು? ಪಾಪಿ! ಸ್ಮರನೆ! ದಗ್ಧನಾಗು.

ಕಾ:- ಹಾ! ಗುರುದೇವ. ಕರ್ತವ್ಯವನ್ನು ಮಾಡಿದೆ. [ಉರಿದು ಭಸ್ಮವಾಗುವನು.]

ನಂದಿ:- ಆಯಿತೆ? ಸೊಕ್ಕುವುರಿಯಿತೆ? ಆದರೇನಿದು? ಈ ಕೈಲಾಸಪತಿಯನ್ನು ಕೆರಳಿಸಿ, ಲೋಕವನ್ನೇ ಸುಡುವಂತೆ ಮಾಡಿದ. ದೇವಾಧಿದೇವಾ. ಶಿವನೆ. ಮಂಗಳದಾಯಕನೆ! ಲೋಕವೆಲ್ಲ ತಲ್ಲಣಿಸುತ್ತಿದೆ. ಶಾಂತಿ ಮೂರ್ತಿಯಾಗಿ ಶಿವನಾಗಿ ಕಂಗೊಳಿಸು.

ಪಾ:- ಎನ್ನೊಡೆಯ, ಲೋಕವೆಲ್ಲ ನಡುಗಿ ಕಂಗೆಡುವುದು. ನಿನ್ನ ಉಗ್ರತೆಯನ್ನು ಶಾಂತಮಾಡು ದೇವಾ. ನಮ್ಮ ಪ್ರಾರ್ಥನೆಯನ್ನು ಮನ್ನಿಸು.

ರತಿ:- [ಪ್ರವೇಶಿಸಿ] ಎಲ್ಲರಿಗೂ ಪ್ರಣಾಮಗಳು. ಎನ್ನ ಇನಿಯ ಕಾಮದೇವನು ಇಲ್ಲಿಗೆ ಬಂದಿದ್ದನೆ?

ನಂ:- ಇದೋ, ಶಂಕರದೇವನ ತಪೋಭಂಗ ಮಾಡಿದ್ದಕ್ಕೆ ಭಸ್ಮವಾಗಿ ಬಿದ್ದ.

ರತಿ:- ಅಯ್ಯೋ ಬೇಡವೆಂದರೂ ಕೇಳದೆ ಬಂದು ಮೃಡನ ಕೋಪಕ್ಕೆ ಗುರಿಯಾದಿಯಾ ಪ್ರಿಯಾ! ಮಹಾಭಾಗ್ಯ ನಿಧಿಯೆ! ಲೋಕಮೋಹ

ನಾಂಗನೆ? ಇಂದು ನಿನ್ನಂಗವೇ ಭಸ್ಮವಾಯಿತಲ್ಲ! ಮಹಾದೇವ! ನಿನ್ನಲ್ಲಿ ಎನ್ನ ಸೌಭಾಗ್ಯದ ಭಿಕ್ಷೆ ಬೇಡುವೆ. ದೇವಾ! ತೋರಿಸು ಎನ್ನ ಇನಿಯ ನನ್ನು. ಗಿಳಿಯನ್ನು ಹೂಡಿದ ರಥದಲ್ಲಿ ಕುಳಿತು, ಚಲುವಾದ ಕಾರ್ಬಿಲ್ಲನ್ನು ಹಿಡಿದು ಲೋಕಕ್ಕೆಲ್ಲ ಮೋಹವನ್ನು ತೋರುವ ಎನ್ನ ಪತಿಯನ್ನು ತೋರಿಸು ದೇವಾ! ಪದುಮದಂತೆ ಆತನ ವದನ. ರತ್ನದಂತೆ ಆತನ ರದನ, ಸಂಪಿಗೆಯ ತೆರ ಆತನ ಮೂಗು. ಹವಳದಂತೆ ಅಧರ, ಕನ್ನಡಿಯಂತೆ, ಪೊಳೆವಕಂಗಳು. ವ್ಯೋಮ ಕೇಶನೆ! ಆತನೆಲ್ಲಿದಾನೆ ತೋರು ಲೋಕೋಪಕಾರಿಯೇ! ತೋರಿಸು. (ಮೂರ್ಛೆಹೊಂದಿ ಕೆಳಗೆ ಬೀಳುವಳು)

ಪಾ–: [ಅವಳ ತಲೆಯನ್ನು ತೊಡೆಯಲ್ಲಿಟ್ಟುಕೊಂಡು] ಅಯ್ಯೋ ಬಾಲೆ. ಏಳು ಮಗು. ಪ್ರಭುವೆ! ರಕ್ಷಿಸು, ಕಾಪಾಡು ಈ ಅಬಲೆಯನ್ನು. ಇವಳು ಶರಣಾಗತಳಾಗಿ ಬಂದಿದಾಳೆ. ಶರಣಾಗತರನ್ನು ರಕ್ಷಿಸುವ ಬಿರದು ನಿನಗಿದೆ.

ನಂ:- ದೇವಿ. ಕಾಮ ಪಡೆದುದನುಂಡ. ಅದಕ್ಕಾಗಿ ರತೀದೇವಿಯೆ ನೀನೇಕೆ ಬರಿದೆ ದುಃಖಿಸುವೆ? ದೈವದಲ್ಲಿದ್ದುದನ್ನು ಯಾರೂ ತಪ್ಪಿಸರು.

[ಪಾರ್ವತಿಯು ರತಿದೇವಿಯನ್ನು ಉಪಚರಿಸಿ ಚೇತರಿಸುವಳು]

ರತಿ:– ದೀನ ಬಂಧುವೆ! ಒಂದೇ ತಪ್ಪಿಗಾಗಿ ಇಂಥ ಕ್ರೂರ ಶಿಕ್ಷೆಯೆ? ನಾನು ವಿಧವೆಯಾಗಿ ಬದುಕುವದಕ್ಕಿಂತ ಸಾಯುವುದೆ ಲೇಸು. ನನ್ನನ್ನೂ ಸುಟ್ಟುಬಿಡು ನಿನ್ನ ಆ ಕಿಡಿಗಣ್ಣಿನಿಂದ. ದೇವಾ ನಿನಗೇನು ಗೊತ್ತಿಲ್ಲವೆ? ಎನ್ನ ಪತಿಯಷ್ಟು ಚೆಲುವರೂ ಈ ವಿಶ್ವದಲ್ಲಿಯೇ ಇಲ್ಲ. ತನ್ನ ಕುಸುಮ ಬಾಣದಿಂದ ಸತಿಪತಿಯರನ್ನು ಕೂಡಿಸುವ ಭಾವಜ್ಞನು ಇನ್ನು ಬೇರೆ ಯಾರೂ ಇಲ್ಲ. ಆದರೆ ಇದೇನು? ಕಾಶಿಗೆ ಹೋಗಿ ಸ್ನಾನ ಮಾಡಿದರೆ ಗಂಗೆಯಲ್ಲಿ ಮುಸುಳೆ ಎಳೆದು ತಿಂದಂತೆ, ಸುರರ ಹಿತಕ್ಕಾಗಿ ನನ್ನ ನಲ್ಲ ಬಂದಿರಲು ಮೃತ್ಯುವಿನ ಬಾಯಿಗೆ ಒಡ್ಡಬೇಕೆ ಸ್ವಾಮಿ?

ಪಾ:- ಪ್ರಭು. ಈಗ ಶಾಂತ ಮೂರತಿಯಾಗಿ ಕಂಗೊಳಿಸುತ್ತಿರುವಿ. ಈಗ ರತಿಯ ಪ್ರಲಾಪದಿಂದ ಕರುಣೆ ಹುಟ್ಟಲಿ ನಿನ್ನಲ್ಲಿ. ಹೆಣ್ಣಿನ ದುಃಖವನ್ನು

ನಾನು ಚನ್ನಾಗಿ ಬಲ್ಲೆ. ವೈಧವ್ಯವು ಬಾರದಂತೆ ಈ ತರುಣಿಗೆ ಕರುಣಿಸು. ಕರುಣಾರ್ದ್ರ ಹೃದಯದಿಂದ ಮಂಗಳಂ ಗೈ.

ದೇವಗುರು:- [ಪ್ರವೇಶಿಸಿ] ಶಿವನಿಗೆ ಅನಂತ ಪ್ರಣಾಮಗಳು.

ಮಹಾದೇವ:- ದೇವಗುರುಗಳಿಗೆ ಸುಸ್ವಾಗತ.

ನಂದಿ, ಪಾರ್ವತಿ, ರತಿ:- ದೇವ ಗುರುಗಳಿಗೆ ಅನಂತ ಪ್ರಣಾಮಗಳು.

ದೇವಗುರು:- ನಿಮಗೆಲ್ಲ ಸೊಗವಕ್ಕೆ.

ರತಿ:- ಗುರುಗಳೇ! ಇದು ನೋಡಿ ಎನ್ನ ಪ್ರಿಯನನ್ನು ಆಹುತಿ ಕೊಟ್ಟು ನನ್ನನ್ನು ವಿಧವೆಯನ್ನಾಗಿ ಮಾಡಿದಿರಿ.

ಗುರು:- ಶೋಕಿಸದಿರು ಬಾಲೆ. ಮಹಾದೇವನು ಕರುಣಿಸುವನು. ತುಸು ತಡೆ. ಶಂಕರದೇವಾ! ಕಾಮದೇವನು ದೇವತೆಗಳ ಹಿತಕ್ಕಾಗಿ, ತಾರಕಾಸುರನ ವಧೆಗಾಗಿ ನಿನ್ನ ತಪಸ್ಸನ್ನು ಭಂಗಮಾಡಿದ್ದಾನೆ. ಮಹಾ ತ್ಯಾಗಿಯಾಗಿದ್ದಾನೆ.

ಮಹಾದೇವ:- ದೇವಗುರುಗಳೆ! ನಿಜವಾಗಿಯೂ ಕಾಮ ತನ್ನ ಶಕ್ತಿ ಮೀರಿ ಸಾಹಸಮಾಡಿದ್ದಾನೆ. ಕೊನೆಗೆ ಮರಣಕ್ಕೂ ತುತ್ತಾದ. ನಿಜವಾಗಿಯೂ ಆತನ ತ್ಯಾಗ ಶ್ಲಾಘನೀಯ.

ಗುರು:- ಈ ಬಾಲೆಯ ಮೇಲೆ ಅನುಗ್ರಹಿಸಬೇಕು.

ಮಹಾದೇವ:- ಆಗಲಿ, ರತಿದೇವಿ. ನಿನಗೆ ವೈಧವ್ಯವಿಲ್ಲ. ಹೃದಯದಲ್ಲಿ ಸ್ಮರಿಸಿದಕೂಡಲೆ ನಿನ್ನ ರಮಣನು ಮನಸಿಜಾತನಾಗಿ ಬಂದು ನಿತ್ಯ ಭೋಗವ ಕೊಡುವ.

ರತಿ:- (ಸಂತೋಷದಿಂದ) ಜಯದೇವ, ಜಯ ಮಹಾದೇವ, ನಾನೀಗ ಸ್ಮರಿಸಲಾ!

ನಂದಿ:- ಓಹೋ ಆಗಬಹುದು. ವರಪ್ರದಾನವಾಗಿಬಿಟ್ಟಿದೆ.

ರತಿ:- ಬಾ ಎನ್ನ ಮದನ್ನಾ. ಹೌದು. ಬಂದೆಯಾ ದೊರೆಯೆ! ಬಾ. ನಿರಂತರ ನಿನ್ನ ಸಹವಾಸವೇ ಇರಲಿ ಎನಗೆ.

ಗುರು:- ರತಿದೇವಿ, ನೀ ಇನ್ನು ಹೊರಡಬಹದು.

ರತಿ:- ದೇವಾ! ನನ್ನ ಪತಿಯ ಭಸ್ಮವು ವ್ಯರ್ಥವಾಗಬಾರದು.

ಮಹಾ:- ಆಗಲಿ! ಇದೋ ನಾನೇ ಬಳಿದುಕೊಂಡು ಅದನ್ನು ಪಾವನ ಗೊಳಿಸುತ್ತೇನೆ.

ರತಿ:- ದೇವಾ! ನಿಜವಾಗಿಯೂ ನೀನು ಮಂಗಳ ಪ್ರದಾಯಕನು. ನಿಮಗೆ ಅನಂತಾನಂತ ಕೋಟಿ ನಮನಗಳು.

ಮಹಾ:- ಆಗಲಿ, ಮಗಳೆ. ನೀನು ನಿಶ್ಚಿಂತಳಾಗಿರು, ನೀನು ಶಂಬ ರನ ಬಳಿ ಹೋಗಿರು ನಿನ್ನ ಗಂಡ, ಕೃಷ್ಣತನಯನಾಗಿ ಅವತರಿಸಿ ಬಂದು ನಿನಗೆ ದೊರೆಯುವನು.

ಗುರು:- ಯಾಕೆ ವೃಷಭರಾಜ! ಕಾಮನ ತ್ಯಾಗ ಸ್ಮರಣೀಯವಾ ಗಿದೆಯಲ್ಲವೆ?

ನಂ:- ಅಲ್ಲವೆ ಮತ್ತೆ?

ಮ:- ಇಂದಿನಿಂದ ಲೋಕದಲ್ಲಿ, ಕಾಮನು ದೇವತೆಗಳ ಹಿತಕ್ಕಾಗಿ ಮಾಡಿದ ಈ ತ್ಯಾಗದ ದಿನವನ್ನು ಆಚರಿಸಲಿ.

ಗುರು:- ಮಹಾದೇವರಿಗೆ ಜಯವಾಗಲಿ.

ರತಿ:- ನನಗೆ ಅಪ್ಪಣೆ ಕೊಡಿರಿ.

ಮಹಾ:- ರತಿದೇವಿಗೆ ಒಡವೆ ವಸ್ತ್ರಾಭರಣಗಳನ್ನೆಲ್ಲ ಕೊಟ್ಟು ಕಳು ಹಿಸಿರಿ.

ನಂದಿ:- ಪ್ರಭು ಚಿತ್ತ. ವ್ಯವಸ್ಥೆ ಮಾಡುವೆ.

[ ರತಿದೇವಿ, ನಂದಿ ಹೋಗುವರು ]

ಗುರು:- ಮಹಾದೇವ! ತಾರಕಾಸುರನ ಸಂಹಾರ ಬೇಗ ಆಗಬೇಕಲ್ಲ.

ಮಹಾ:- ಅದು ದೈವ ಲೀಲೆಯಂತೆ ನಡೆಯುವುದು.

ಅಶರೀರವಾಣಿ:- ತಪೋಭಂಗ ಹೊಂದಿರುವ ಮಹಾದೇವನಿಗೆ ಪಾರ್ವತಿ ದೇವಿಯಿಂದ ಸ್ಕಾಂದನೆಂಬ ಪುತ್ರನು ಕೆಲದಿನಗಳಲ್ಲಿಯೇ ಉದ ಯಿಸಿ ಲೋಕ ಕಂಟಕನಾದ ತಾರಕಾಸುರನನ್ನು ತರಿಯುವ. (ಪುಷ್ಪವೃಷ್ಟಿ) ಜಯ ಮಹಾದೇವ. ಜಯ ಮಹಾದೇವ.

# ಸತ್ಯಾಗ್ರಹ

## ಮುನ್ನುಡಿ

ಸತ್ಯದ ದಾರಿ ಬಹು ಕಷ್ಟದ್ದು. ಆ ದಾರಿಯಲ್ಲಿ ಬರುವ ಮಹಾ ಕಷ್ಟಗಳನ್ನು ಲೆಕ್ಕಿಸದೆ, ಆಗ್ರಹ ಪೂರ್ವಕವಾಗಿ ನಡೆಯಬೇಕಾಗುತ್ತದೆ. ಈ ಆಗ್ರಹ ಸತ್ಯನಿಷ್ಠೆಗಾಗಿಯೇ ಹೊರತು, ಬರುವ ಕಷ್ಟಗಳಿಗಾಗಿ ಅಲ್ಲ. ಕಷ್ಟಗಳನ್ನು ಸಂತೋಷದಿಂದ, ಅಹಿಂಸೆಯಿಂದ ಸಹಿಸಿದರೆ ಸತ್ಯದ ಸಾಕ್ಷಾತ್ಕಾರವಾಗಿ ಜ್ಞಾನಜ್ಯೋತಿ ಕಂಗೊಳಿಸುತ್ತದೆ. ಈ ಸತ್ಯಶೋಧನೆಗಾಗಿ ಸಂಗ್ರಾಮ ಮಾಡಿದ ಸತ್ಯಾಗ್ರಹ ವೀರರು ನಮ್ಮ ಭರತಖಂಡದಲ್ಲಿ ಬೇಕಾದಷ್ಟು ಜನ ಇದ್ದಾರೆ. ಅವರ ಜೀವನಚರಿತ್ರೆ ಆತ್ಮೋದ್ಧಾರಕ್ಕೆ ಮಾರ್ಗದರ್ಶಿಯಾಗಿದೆ. ಇಂತಹವರಲ್ಲಿ ಒಬ್ಬರಾದ ಶ್ರೀ ಪ್ರಹ್ಲಾದ ರಾಜರು ಅಗ್ರಗಣ್ಯರಾಗಿ, ನಿಸ್ಸೀಮವಾದ ಮಹಿಮೆಯನ್ನು ಮೆರೆದಿದ್ದಾರೆ. ಅವರ ಆ ಉಜ್ವಲ ಚರಿತೆಯನ್ನು ಸಂಕ್ಷೇಪವಾಗಿ ರೂಪಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

## : ಪಾತ್ರಗಳು :

**ಹಿರಣ್ಯಕಶಿಪು:**—ದಾನವೇಂದ್ರ

**ಪ್ರಹ್ಲಾದ:**—ರಾಜಕುಮಾರ

**ಸುಮುಖ:**—ರಾಜಕುಮಾರನ ನಚ್ಚಿನ ಸ್ನೇಹಿತ

**ಚಂಡ,ಅಮರ್ಕ:**—ಶುಕ್ರಾಚಾರ್ಯರ ಮಕ್ಕಳು, ರಾಜಪುರೋಹಿತರು.

**ಜನನಾಯಕ:**—ಮೊದಲು ಅತಿಥಿಯೆಂದು ಆ ಮೇಲೆ ರಾಜದ್ರೋಹಿ ಯೆಂದು ಪರಿಚಿತವಾಗುತ್ತಾನೆ.

[ಸುಚೇತ, ಬಾಲಕರು, ರಾಜಭಟರು, ನಗರರಕ್ಷಕ, ರಾಜಸೇವಕ ನರಸಿಂಹ ಅವತಾರ, ಮುಂತಾದವರು]

೧

[ದಾನವೇಂದ್ರ ಹಿರಣ್ಯಕಶಿಪುವಿನ ರಾಜಧಾನಿ. ರಾಜಕುಮಾರನ ನಚ್ಚಿನ ಸ್ನೇಹಿತನಾದ ಸುಮುಖ ಮನೆಯ ಬಾಗಿಲನ್ನು ಮುಚ್ಚಿಕೊಂಡು ಉಪನಿಷತ್ತುಗಳನ್ನು ಪಠಿಸುತ್ತ ಕುಳಿತಿದ್ದಾನೆ. ಒಮ್ಮೆಲೆ ಬಾಗಿಲು ಧುಡುಂನೆ ತೆಗೆಯುತ್ತದೆ. ಯಾವನೋ ಒಬ್ಬ ಒಳಗೆ ತೇಕುತ್ತ ಬರುತ್ತಾನೆ.]

ಸುಮುಖ:—(ಗಾಬರಿಯಾಗಿ) ಯಾರದು ?

ಅತಿಥಿ:—[ದೈನ್ಯದಿಂದ] ಅಯ್ಯಾ, ನಾನೊಬ್ಬ ಪರದೇಶಿ. ಶರಣು ಬಂದಿದ್ದೇನೆ. ರಕ್ಷಿಸು. ರಾಜಭಟರು ಬೆನ್ನುಹತ್ತಿದ್ದಾರೆ.

ಸುಮುಖ:—ನೀವು ಯಾರು ?

ಅತಿಥಿ:—ಎಲ್ಲವನ್ನೂ ಹೇಳುತ್ತೇನೆ. ರಾಜಭಟರು ಬೆನ್ನುಹತ್ತಿದ್ದಾರೆ. [ಹೊರಗೆ ಜನರು ಓಡಿಹೋದ ಸಪ್ಪಳ] (ಮೆಲ್ಲಗೆ) ಅದೋ, ರಾಜಭಟರು ನಿಮ್ಮ ಮನೆಯ ಮುಂದಿನಿಂದಲೇ ಬಲಕಡೆಗೆ ಓಡಿಹೋದರು.

ಸುಮುಖ:—ಆಯಿತು. ನೀವಿನ್ನು ನಿಶ್ಚಿಂತವಾಗಿರಿ. ಬನ್ನಿರಿ. ಇಲ್ಲಿ ಕುಳಿತುಕೊಳ್ಳಿರಿ.

ಅತಿಥಿ:—ಗೆಳೆಯಾ, ನೀವು ನನಗೆ ಆಶ್ರಯಕೊಟ್ಟು ಉಪಕಾರ ಮಾಡಿದ್ದೀರಿ.

ಸುಮುಖ:—ನೀವು ಯಾರು? ನಿಮ್ಮ ವೃತ್ತಾಂತವೇನು ? ನೀವು ಮಾಡಿದ ಅಪರಾಧವೇನು?

ಅತಿಥಿ:—ಯಜ್ಞ ಯಾಗಾದಿಗಳನ್ನು ನಡೆಸುತ್ತಿದ್ದೇನೆ. ವಿದ್ಯಾಪ್ರಸಾರ ಮಾಡುತ್ತೇನೆ. ಜನಸೇವೆ ಮಾಡುತ್ತೇನೆ. ಭಗವದಾರಾಧನೆಯನ್ನು ನಡೆಸುತ್ತೇನೆ. ಇದಕ್ಕಾಗಿ ರಾಜ್ಯಾಧಿಕಾರಿಗಳು ಆಗಾಗ ನನ್ನನ್ನು ಸೆರೆಹಿಡಿದು ಸೆರೆಮನೆಯಲ್ಲಿಟ್ಟು ಶಿಕ್ಷೆಕೊಟ್ಟದ್ದಾರೆ. ಆದರೂ ದೇವರ ದಯದಿಂದ ಬಿಡುಗಡೆ ಹೊಂದಿದೆ. ಆದರೆ ಈಗ ಮತ್ತೆ ರಾಜಾಜ್ಞೆಯಂತೆ ನನ್ನನ್ನು ಸೆರೆಹಿಡಿದು ರಾಜಧಾನಿಗೆ ತಂದರು. ಅವರ ಕೈಯಿಂದ

ಪಾರಾಗಿದ್ದೇನೆ. ಭಗವದ್ಭಕ್ತನಾದ ರಾಜಕುಮಾರ ಪ್ರಹ್ಲಾದನನ್ನು ....... ಆದರೆ ತಾವು ?

ಸುಮುಖ:—ಮಾನ್ಯರೆ, ಸಂಕೋಚಪಟ್ಟುಕೊಳ್ಳಬೇಡಿ. ನೀವು ಈಗ ರಾಜಕುಮಾರನ ಆಪ್ತ ಸ್ನೇಹಿತನಲ್ಲಿಗೆ ಬಂದಿದೀರಿ. ನೀವು ನಿಶ್ಚಿಂತವಾಗಿರಿ.

ಅತಿಥಿ:—ಆಹಾ, ಭಗವಂತನ ಯೋಜನೆಯೇ ಬಹು ವಿಚಿತ್ರ. ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲ. ರಾಜಕುಮಾರನ ಸಂದರ್ಶನವನ್ನು ಬೇಗ ಮಾಡಿಸಿರಿ.

ಸುಮುಖ:—ಅವಶ್ಯವಾಗಿಯೂ ನೀವು ಅವರನ್ನು ಸಂದರ್ಶಿಸುವಿರಿ. ನಿಮ್ಮಂಥ ತಪಸ್ವಿಗಳನ್ನು ಕಂಡರೆ ಆತನಿಗೆ ಬಹು ಪ್ರೀತಿ. ತಾವು ಹೇಳಿದ ಸಂಕ್ಷಿಪ್ತ ಇತಿಹಾಸದಿಂದ ನೀವು ಗೋದಾವರಿ ತೀರದ ಸುಪ್ರಸಿದ್ಧ ಜನ ನಾಯಕರಾದ ನರಸಿಂಹರು ತಾವೇ ಇರಬೇಕು ಎಂದು ನನಗೆ ಭಾಸ ವಾಗುತ್ತಿದೆ.

ಅತಿಥಿ:—ಗೆಳೆಯಾ, ನೀನು ಭಗವದ್ಭಕ್ತನಾಗಿರುವುದರಿಂದ ಈ ರಾಜ್ಯದ ವಿರೋಧಿಗಳೆಂದು ಪರಿಗಣಿಸಲ್ಪಡುವವರ ಶ್ರೇಣಿಗೆ ಸೇರಿದವರಾಗಿದ್ದೀರಿ. ಆದ್ದರಿಂದ ನಿಮಗೆ ಸಹಜವಾಗಿಯೇ ನನ್ನ ಬಗ್ಗೆ ಸಹಾನುಭೂತಿ ಹುಟ್ಟಿದೆ. ತೀವ್ರ ಪರಿಚಯವೂ ಆಗಿದೆ. ಆದರೆ ನೋಡು. ಇಂದು ದೈತ್ಯಕುಲವು ಸತ್ಕರ್ಮಗಳನ್ನು ನಡೆಸಕೂಡದೆಂದು ನಿಷೇಧಿಸಿದೆ. ದೈತ್ಯರ ರಾಜನಾದ ಹಿರಣ್ಯಕಶಿಪು ಇದಕ್ಕೆ ಶಿಖರವನ್ನೇ ಇಟ್ಟಿದ್ದಾನೆ. ಅವನ ಈ ರಾಜ್ಯದಲ್ಲಿ ಒಳ್ಳೆಯ ಜನಕ್ಕೆ ಉಳಿಗಾಲವಿಲ್ಲದಂತಾಗಿದೆ.

ಸುಮುಖ:—ಜನರು ಶಾಸನವನ್ನು ಉಲ್ಲಂಘಿಸುವುದೇ ಇದಕ್ಕೆ ಉಪಾಯವೆಂದು ನೀವು ಕಾರ್ಯತಃ ತೋರಿಸಿದ್ದೀರಲ್ಲ !

ಅತಿಥಿ:—ಅವನ ರಾಜಶಾಸನವನ್ನು ವಿರೋಧಿಸಿ ನಿಲ್ಲುವ ಶಕ್ತಿ ಜನಕ್ಕೆ ಭಗವಂತನೇ ಕೊಡುತ್ತಿದ್ದಾನೆ. ದೈತ್ಯರು ನರರೆಂದು ಕರೆಯುವ ಜನರಿಗಂತೂ ಸಹಿಸಲಸಾಧ್ಯವಾದ ಉಪದ್ರವವನ್ನು ಕೊಡುತ್ತಿದ್ದಾರೆ. ಆದರೆ ಜನರು ಇದನ್ನು ಸಹಿಸಲಾರದವರಾಗಿದ್ದಾರೆ. ರಾಜಶಾಸನಗಳನ್ನು ಮುರಿಯುವ ಹೊರತು ಬೇರೆ ಉಪಾಯವೇ ಇಲ್ಲ. ರಾಜನು ರಾಜ

ಕುಮಾರನಿಗೆ ಕೊಟ್ಟ ಬಗೆಬಗೆಯ ಹಿಂಸೆಗಳನ್ನು ಸಹಿಸಿ ಸಹಿಸಿ ಸತ್ಯವನ್ನು ಅನುಷ್ಠಿಸಿದ ಸಂಗತಿಯನ್ನು ಕೇಳಿ ಜನರಿಗೆ ಇನ್ನಷ್ಟು ಉತ್ಸಾಹ ಹೆಚ್ಚಿದೆ.

ಸುಮುಖ:—ನನಗಿಂದು ಬಹಳ ಆನಂದವಾಗಿದೆ. ಸುಪ್ರಸಿದ್ಧ ಜನನಾಯಕರನ್ನು ದೇವರು ನನ್ನ ಮನೆಗೆ ಅತಿಥಿಯಾಗಿ ಕಳಿಸಿಕೊಟ್ಟಿರುವುದ್ಕಕ್ಕಾಗಿ ಆತನಲ್ಲಿ ನನ್ನ ಅನಂತ ಕೃತಜ್ಞತೆಗಳು. ಜನಪ್ರಿಯರಾದ ಸತ ನಿಷ್ಠರಾದ ನೀವು, ಸತ್ಯಾಗ್ರಹಿಯಾದ ರಾಜಕುಮಾರನನ್ನು ಸಂದರ್ಶಿಸಿ ರಾಜಶಾಸನವನ್ನು ವಿರೋಧಿಸುವ ಜನಕ್ಕೆ ಬೆಂಬಲವನ್ನಿತ್ತರೆ ಹಿರಣ್ಯಕಶಿಪು ವಿನ ಈ ಅಸುರೀ ರಾಜ್ಯವು ತಾನೇ ಕುಸಿದುಹೋದೀತು.

ಅತಿಥಿ:—ಪರಮನೀಚನಾದ ಹಿರಣ್ಯಕಶಿಪುವಿನಲ್ಲಿ ಭಗವದ್ಭಕ್ತನಾದ ಮಗನು ಅವತರಿಸಿದ ದಿನವೇ, ಅಸುರೀ ರಾಜ್ಯದ ಬುಡ ಸಡಲಿದೆ. ಭಗವದ್ಭಕ್ತನಾದ ರಾಜಕುಮಾರನಿಗೆ ದಾನವೇಂದ್ರನು ಬಹಳ ಹಿಂಸೆ ಕೊಡುತ್ತಾನೆಂಬ ಸಂಗತಿಯು ಜನರನ್ನು ಮತ್ತಿಷ್ಟು ಸಂತಾಪಗೊಳಿಸಿದೆ. ಗೆಳೆಯಾ! ಪ್ರಹ್ಲಾದರಾಯನು ಹಿಂಸೆಗಳನ್ನೆಲ್ಲ ಹೇಗೆ ತಡೆದುಕೊಂಡನು? ನನಗೆ ವಿವರಿಸಿ ಹೇಳು.

ಸುಮುಖ:- ಒಂದು ದಿನ ದಾನವೇಂದ್ರನು ರಾಜಕುಮಾರನನ್ನು ಕರೆಸಿ, ಆತನು ಆವರೆಗೆ ಮಾಡಿದ ವಿದ್ಯಾಭ್ಯಾಸದ ಸಾರವನ್ನು ಹೇಳೆಂದನು. ಅದೆಲ್ಲವೂ ಅಸಾರವಾಗಿದೆಯೆಂದು ಹೇಳಿ ಗುರುಗಳ ಮಾತುಗಳನ್ನು ಖಂಡಿಸಿ ಭಗವಂತನ ಮಹಿಮೆಯನ್ನು, ಸಂಸಾರದ ಅಸಾರವನ್ನು, ವಿವರಿಸತೊಡಗಿದನು. ಅದನ್ನು ಕೇಳಿ ಹಿರಣ್ಯಕಶಿಪು ಗುರುಗಳಿಗೆ ಸಿಟ್ಟುಮಾಡಿದನು. ಇನ್ನು ಮುಂದೆ ಪ್ರಹ್ಲಾದನಿಗೆ ಅರ್ಥ, ಕಾಮ ಇವೆರಡೇ ಪುರುಷಾರ್ಥಗಳನ್ನು ಮಾತ್ರ ಕಲಿಸಬೇಕೆಂದು ಆಜ್ಞೆಮಾಡಿ, ಮಗನಿಗೆ ಛೀ ಮಾಡಿ ಕಳಿಸಿದನು.

ಅತಿಥಿ:- ಈ ಆಜ್ಞೆಯನ್ನು ಎಲ್ಲಕಡೆಗೂ ವಿಧಿಸಲಾಗಿದೆ.

ಸುಮುಖ:- ಅದರೇನು? ಪ್ರಹ್ಲಾದರಾಯನಿಗೆ ಈಗ ಹೊಸದಾಗಿ ಉಪದೇಶವಾಗಬೇಕಾದುದು ಏನಿದೆ? ಗುರುಗಳು ಹೇಳುವ ಮಿಥ್ಯಜ್ಞಾನವನ್ನೆಲ್ಲ ಖಂಡಿಸಿ, ಬಾಲಕರಿಗೆಲ್ಲ ದೇವರ ಮಹಿಮೆಯನ್ನು ದೇಹದ ಅಶಾ

ಕ್ಷಶವನ್ನು, ಸಂಕಲ್ಪತ್ಯಾಗವನ್ನು, ನಿಷ್ಕಾಮ ಕರ್ಮಯೋಗವನ್ನು, ಫಲ ಸಮರ್ಪಣೆಯನ್ನು, ದಯ ದಮ ದಾಸ್ಯಗಳನ್ನು ಹೇಗೆ ಧಾರಣ ಮಾಡಿಕೊಳ್ಳ ಬೇಕೆಂಬುದನ್ನು ವಿವರವಾಗಿ ತಿಳಿಸಿ ಹೇಳಿ, ಅವರಿಗೆಲ್ಲ ಸಮೀಚೀನವಾದ ಜ್ಞಾನವನ್ನು ಉಪದೇಶಿಸತೊಡಗಿದನು.

ಅತಿಥಿ:- ಧನ್ಯ ಪ್ರಹ್ಲಾದಕುಮಾರ! ನೀವೆಲ್ಲರೂ ಭಾಗ್ಯವಂತರು. ಹಾಂ! ಮುಂದೇನಾಯಿತು?

ಸುಮುಖ:- ಮಾನ್ಯರೇ! ತಾವು ಮೊದಲು ಸ್ನಾನಾದಿಗಳನ್ನು ತೀರಿಸಿ. ಮತ್ತೆ ಎಲ್ಲವನ್ನೂ ಹೇಳುತ್ತೇನೆ.

ಅತಿಥಿ:- ಭಗವದ್ಭಕ್ತರ ಚರಿತೆಯನ್ನು ಕೇಳುವುದೇ ಸ್ನಾನ. ಹೇಳಿ. ನನ್ನನ್ನು ಅತಿಥಿಯೆಂದು ಬಗೆಯಬೇಡಿರಿ. ನಾನು ನಿಮ್ಮ ಸೋದರ. ಹಾಂ! ಮುಂದೇನಾಯಿತು?

ಸುಮುಖ:- ಗುರುಗಳಿಗೆ ಬಹಳ ಕೋಪ ಬಂತು. ಪ್ರಹ್ಲಾದರಾಜನನ್ನು ದಂಡಿಸಿದರು. ಆದರೇನು? ರಾಜಕುಮಾರನು ಅಂಜಲಿಲ್ಲ; ಅಳುಕಲಿಲ್ಲ. ದಂಡಿಸಿದುದಕ್ಕಾಗಿ ಪ್ರತಿಯಾಡಲಿಲ್ಲ. ಹಸನ್ಮುಖಿಯಾಗಿಯೇ ಇದ್ದ. ತನ್ನ ಜ್ಞಾನಪ್ರಸಾರದ ಕಾರ್ಯವನ್ನು ಮುಂದುವರಿಸಿದನು.

ಅತಿಥಿ:- ಆಹಾ! ಸತ್ಯದ ಸಾಧನೆಗಾಗಿ ಜ್ಞಾನಿಗಳು ಎಂತೆಂತಹ ಕಷ್ಟಗಳನ್ನೆದುರಿಸುವರು!

ಸುಮುಖ:- ಗುರುಗಳು ಬಂದು ದಾನವೇಂದ್ರನಿಗೆ ಈ ಸಂಗತಿಯನ್ನು ತಿಳಿಸಿದರು. ಹಿರಣ್ಯಕಶಿಪುವಿನ ಕೋಪ ಒಡವಾಗ್ನಿಯಂತೆ ಕೆರಳಿತು. ರಾಜಕುಮಾರನ ಕೊಲೆಗೆ ಆಜ್ಞೆಯಾಯಿತು. ಆಗ ಇಡೀ ಲೋಕವೇ ತಲ್ಲಣಿಸಿತು. ರಾಜಾಜ್ಞೆಯನ್ನು ಮೀರುವ ಶಕ್ತಿಯಾರಿಗುಂಟು? ಉಳಿದ ರಾಜಶಾಸನವನ್ನು ಉಲ್ಲಂಘಿಸಿದ ರಾಜಕುಮಾರನು ಈ ರಾಜಶಾಸನವನ್ನು ವಿರೋಧಿಸಲಿಲ್ಲ. ಸಂತೋಷದಿಂದ ಸ್ವಾಗತಿಸಿದನು. ಕೊಲೆಗಡುಕರು ಕೂಡ ಮನಸ್ಸಿಲ್ಲದೆ ತಮ್ಮ ಶಸ್ತ್ರವನ್ನು ಎತ್ತಿ ಆತನ ಮೇಲೆ ಹಾಕಿದರು. ಆಯುಧಗಳೇ ಮುರಿದುವು.

ಅತಿಥಿ:- ಭಗವಂತನೇ ರಕ್ಷಕನಾಗಿರುವಾಗ ಈ ಆಯುಧಗಳೇನು ಮಾಡಿಯಾವು ?

ಸುಮುಖ:- ಅಷ್ಟಕ್ಕೆ ಬಿಡಲಿಲ್ಲ. ಕಾಯ್ದ ಎಣ್ಣೆಯಲ್ಲಿ ಆತನನ್ನು ಅದ್ದಿದರು. ಎಣ್ಣೆ ತಣ್ಣಗಾಯಿತು. ಆತ ಹರಿನಾಮ ಸ್ಮರಣೆಯಲ್ಲಿ ನೈಮ ರೆತಿದ್ದನು. ಆನೆಯ ಕಾಲಿನಿಂದ ತುಳಿಸಿದರು. ಏನೂ ಆಗಲಿಲ್ಲ. ಭಗವ ನ್ನಾಮೋಚ್ಚಾರಣೆ ಅವ್ಯಾಹತವಾಗಿ ನಡೆಯಿಸಿದ್ದ. ಬೆಟ್ಟದಿಂದ ಕೆಳಗೆ ಧುಮುಕಿಸಿದರು. ಬಾಲಕನನ್ನು ಭೂದೇವಿ ಎತ್ತಿಹಿಡಿದಳು. ದೇವರ ನಾಮ ಹೇಳುತ್ತ ಎದುರಿಗೆ ಬಂದುನಿಂತ. ಕುಡಿಯಲು ವಿಷವನ್ನು ಕೊಟ್ಟರು. ಅದನ್ನು ಕುಡಿದು ತೇಗಿದ. ಎಂದಿನಂತೆ ಹಸನ್ಮುಖಿಯಾಗಿ ನಿಂತೇ ಇದ್ದ. ಭಗವಂತನು ನಡೆಸಿದ ಪರೀಕ್ಷೆಗಳಲ್ಲಿ ತೇರ್ಗಡೆಯಾದ. ದೈತ್ಯರು ಏನು ಮಾಡಬೇಕೆಂಬುದು ತೋಚದೆ ಕೈಬಿಟ್ಟರು. ಈಗ ರಾಜ ಕುಮಾರ ಗುರುಕುಲದಲ್ಲಿಯೇ ಇದ್ದಾನೆ.

ಅತಿಥಿ:- ಆಹಾ! ಇಂಥ ಭಗವದ್ಭಕ್ತನ ದರ್ಶನವಾದರೆ ಭವಬಂಧ ನವೇ ನೀಗುತ್ತದೆ. ಗೆಳೆಯಾ ನನಗೆ ಅವರ ದರ್ಶನವನ್ನು ಮಾಡಿಸಿರಿ.

ಸುಮುಖ:- ಆಗಲಿ. ತಾವು ಮೊದಲು ಸ್ನಾನವನ್ನು ತೀರಿಸಿರಿ. ಇಂದು ಭೋಜನದ ತರುವಾಯ ಸಾಯಂಕಾಲ ನಾವೆಲ್ಲ ಗುರುಕುಲಕ್ಕೆ ಮರಳಿ ಹೋಗುತ್ತೇವೆ. ತಾವೂ ನನ್ನ ಜೊತೆಗೆ ಬರುವಿರಿ.

ಅತಿಥಿ:- ಹಾಗೆಯೆ ಆಗಲಿ.

೨

[ರಾಜಧಾನಿಯ ಗುರುಕುಲದ ಒಂದ. ಭಾಗ. ಪ್ರಹ್ಲಾದನು ಕುಳಿತಿದ್ದಾನೆ. ಸುತ್ತಲೂ ಬಾಲಕರು ನೆರೆದಿದ್ದಾರೆ.]

ಪ್ರಹ್ಲಾದ:- ಗೆಳೆಯರೆ, ನಾವೆಲ್ಲರೂ ನಮ್ಮ ಗೃಹಗಳಿಂದ ಮರಳಿ ಗುರುಕುಲಕ್ಕೆ ಬಂದಿದ್ದೇವೆ. ನಾಳೆಯಿಂದ ಪುನಃ ನಮ್ಮ ಅಭ್ಯಾಸ ಆರಂ ಭವಾಗುತ್ತದೆ. ದೇವರು ನಮಗೆಲ್ಲರಿಗೂ ಸರಿಯಾದ ಜ್ಞಾನ ಕೊಡಲಿ ಎಂದು ಪ್ರಾರ್ಥಿಸೋಣ.

ಸುಚೇತ:- ರಾಜಕುಮಾರ! ನಮ್ಮ ರಾಜ್ಯದಲ್ಲಿ ದೇವರ ಪ್ರಾರ್ಥನೆಯನ್ನು ನಿಷೇಧಿಸಲಾಗಿದೆ. ಈ ನಿಷೇಧಾಜ್ಞೆಯನ್ನು ಉಲ್ಲಂಘಿಸಕೂಡದೆಂದು ನಾವು ನಿನಗೆ ಹೇಳಿದರು ಕೂಡ, ನೀನು ನಿನ್ನ ತರ್ಕಬದ್ಧವಾದ ಮಾತುಗಳಿಂದ ನಮ್ಮ ಮನ ಒಲಿಸಿ ನಮ್ಮನ್ನು ಈ ಕಾರ್ಯಕ್ಕೆ ಹಚ್ಚಿದಿ. ಆದರೆ ಈಗ ನಮ್ಮ ಹಿರಿಯರೆಲ್ಲರೂ ರಾಜಾಜ್ಞೆಯನ್ನು ಮೀರಿ ನಡೆಯಕೂಡದೆಂದು ಕಟ್ಟಪ್ಪಣೆ ಮಾಡಿದ್ದಾರೆ. ದೈತ್ಯರಾದ ನಾವು ನಮ್ಮ ರಾಜನನ್ನು ಬಿಟ್ಟು ಅನ್ಯರನ್ನು ಸ್ತುತಿಸಿ ರಾಜದ್ರೋಹಿಗಳಾಗುವುದು ಬೇಡ. ಗುರುಗಳು ಹೇಳಿದಂತೆ ನಡೆಯುವಾ.

ಪ್ರಹ್ಲಾದ:- ಸುಚೇತ, ಹಿರಿಯರು ಕಟ್ಟಪ್ಪಣೆ ಮಾಡಿದ್ದಾರೆ ಅದನ್ನು ವಿರೋಧಿಸಬಾರದೆಂಬ ಮಾತು ಸಮಂಜಸವಾಗಿದೆ. ಆದರೆ ಹಿರಿಯರ ಅಪ್ಪಣೆ ಸರಿಯಾಗಿದೆಯೆ ಇಲ್ಲವೆ ಎಂಬುದನ್ನು ನಾವು ತಿಳಿವಕೊಳ್ಳಬೇಡವೆ ?

ಸುಚೇತ:- ನಾವು ಚಿಕ್ಕವರು. ನಮಗೆ ಅಷ್ಟು ತಿಳುವಳಿಕೆ ಇಲ್ಲ.

ಪ್ರಹ್ಲಾದ:- ತಿಳುವಳಿಕೆ ಇಲ್ಲವೆಂತಲೇ ಸರಿಯಾವುದು ತಪ್ಪುಯಾವುದು ಎಂಬುದನ್ನು ತಿಳಿದವರಿಂದ ವಿಚಾರಿಸಿ, ಸರಿಯಾದ ಜ್ಞಾನವನು ಸಂಪಾದಿಸಬೇಕು. ಈ ಜ್ಞಾನ ಕೇವಲ ಯಾರಾದರು ಹೇಳಿದ ಮಾತ್ರದಿಂದ ಬರುವುದಲ್ಲ. ನಾವೂ ವಿಚಾರ ಮಾಡಬೇಕು. ವಿಚಾರ ಮಾಡಿದಂತೆಲ್ಲ ನಮ್ಮೊಳಗಿರುವ ಪರಮಾತ್ಮನು ನಮ್ಮ ಯೋಗ್ಯತೆಗೆ ಅನುಸರಿಸಿ ನಮಗೆ ಹಿತವಾಗುವ ಹಾಗೆ ತಿಳುವಳಿಕೆ ಕೊಡುತ್ತಾನೆ. ಆದ್ದರಿಂದ ಆ ಪರಮಾತ್ಮನನ್ನೇ ಶರಣು ಹೋಗಬೇಕು. ಆತನೇ ಗುರು. ಆತನ್ನೆ ತಂದೆ. ಆತನೇ ಹಿರಿಯ, ಆತನೇ ಗೆಳೆಯ. ಆತನೇ ಬಂಧು. ಆತನೆ; ನಮಗೆ ದಾರಿ ತೋರುವವ. ಆತನೇ ಸರ್ವರಲ್ಲಿ ಇದ್ದಾನೆ. ಎಲ್ಲರನೂ. ಹುಟ್ಟಿಸಿದ್ದಾನೆ. ಸಂರಕ್ಷಿಸುತ್ತಾನೆ. ಸಂಸಾರದಲ್ಲಿ ನಮ್ಮನ್ನು ತಿರುಗಿಸುತ್ತಾನೆ. ಜ್ಞಾನ ಕೊಡುತ್ತಾನೆ. ಅಂಥ ಸರ್ವಶಕ್ತನಾದ ಭಗವಂತನಲ್ಲಿ ಭಕ್ತಿಯಿಂದ ಶರಣು ಹೋಗೋಣ. [ಸುಮುಖ,ಅತಿಥಿ ಪ್ರವೇಶಿಸುವರು.]

ಸುಮುಖ:- ರಾಜಕುಮಾರನಿಗೆ ಜಯವಾಗಲಿ. ಗೆಳೆಯರೆಲ್ಲರಿಗೂ ಪ್ರಣಾಮಗಳು.

ಸುಚೇತ:- ಸುಮುಖ, ಈ ಅತಿಥಿಗಳಾರು ?

ಅತಿಥಿ:- ರಾಜಕುಮಾರನಿಗೆ ಅನಂತ ಪ್ರಣಾಮಗಳು. ಗುರುಕುಲ ವಾಸಿಗಳಿಗೆ ನನ್ನ ಪ್ರಣಾಮಗಳು.

ಪ್ರಹ್ಲಾದ:- ಆಕಾಶದಿಂದ ಬೀಳುವ ಮಳೆಯ ನೀರು ಸಾಗರಕ್ಕೆ ಹೋಗಿ ಕೂಡುವಂತೆ, ನಾವೆಲ್ಲ ಪರಸ್ಪರರು ಮಾಡುವ ಪ್ರಣಾಮಗಳು ಆ ಪ್ರಣವಮೂರ್ತಿ ಪರಮಾತ್ಮನಿಗೆ ಸಲ್ಲುವುವು. ನೀವಿಬ್ಬರೂ ಕುಳಿತು ಕೊಳ್ಳಿರಿ.

ಸುಮುಖ:- ಗುರುಗಳು ?

ಸುಚೇತ:- ಜಲಾಶಯಕ್ಕೆ ಹೋಗಿದ್ದಾರೆ. ಬರುವುದಕ್ಕೆ ಇನ್ನೂ ಅವಕಾಶವಿದೆ.

ಸುಮುಖ:- ಗೆಳೆಯರೆ, ಅತಿಥಿಗಳ ಪರಿಚಯಕ್ಕಾಗಿ ನೀವೆಲ್ಲರೂ ಕುತೂಹಲರಾಗಿರಬೇಕು. ಅವರು ಗೋದಾವರಿ ತೀರದ ಪ್ರಸಿದ್ಧ ಜನ ನಾಯಕರು. ರಾಜಭಟರು ಸೆರೆಹಿಡಿದು ತಂದಿದ್ದರು. ದೇವರ ದಯದಿಂದ ಮುಕ್ತರಾಗಿ ರಾಜಕುಮಾರನ ದರ್ಶನಕ್ಕಾಗಿ ಬಂದಿದ್ದಾರೆ.

ಪ್ರಹ್ಲಾದ:- ನಾಯಕರೆ, ನಿಮ್ಮ ಪ್ರದೇಶದಲ್ಲಿ ಎಲ್ಲವೂ ಸೌಖ್ಯ ತಾನೆ ?

ಅತಿಥಿ:- ರಾಜ್ಯದ ಅಧಿಕಾರಿಗಳನ್ನು ಅನುಸರಿಸಿಕೊಂಡವರಿಗೆ ಸೌಖ್ಯವಿದೆ, ರಾಜಕುಮಾರ.

ಸುಚೇತ:- ನೀವು ?

ಸುಮುಖ:- ಅವರು ಹೇಳುವುದನ್ನು ಸಂಪೂರ್ಣವಾಗಿ ಮೊದಲು ಕೇಳು.

ಅತಿಥಿ:- ಪ್ರಚಲಿತ ರಾಜಶಾಸನಕ್ಕನುಸರಿಸಿ ಯಾವ ಸತ್ಕರ್ಮವೂ ನಡೆವಂತಿಲ್ಲ. ದಾನ, ಯಜ್ಞ, ತಪಸ್ಸು ಎಲ್ಲಕ್ಕೂ ನಿಷೇಧವಿದೆ.

ಸುಚೇತ:- ಇದೇನು ಹೊಸ ವಿಷಯವಿಲ್ಲ. ನಮ್ಮ ಶತ್ರುಗಳಿಂದ ಸುರಕ್ಷಿತವಾಗಿರುವುದಕ್ಕಾಗಿ ಮಾಡಿದ ಏರ್ಪಾಟು ಅದು. ಆದರಿಂದ ದೈತ್ಯ ಕುಲಕ್ಕೆ ಕ್ಷೇಮವಿದೆ.

ಸುಮುಖ:- ಈ ಮೂರು ಲೋಕಗಳಲ್ಲಿ ದೈತ್ಯರೇ ಇಲ್ಲವಲ್ಲ! ನರರಿದ್ದಾರೆ; ದೇವತೆಗಳಿದ್ದಾರೆ.

ಅತಿಥಿ:- ಗೆಳೆಯರೇ, ನರರು ದೇವತೆಗಳು ದೈತ್ಯರು ಎಂಬ ಭೇದ ಅವರವರ ಹುಟ್ಟಿನ ಮೇಲೆ ಇಲ್ಲ. ಹುಟ್ಟುಸ್ವಭಾವದ ಮೇಲೆ ಇದೆ.

ಪ್ರಹ್ಲಾದ:- ಮುತ್ತಿನಂಥ ಮಾತು. ಶಾಂತಿ, ದಯೆ, ದಮ, ದೈವ ಭಕ್ತಿ ಉಳ್ಳವರು, ಪರಾರ್ಥಪರರಾದವರು ದೇವತೆಗಳು. ಸ್ವಾರ್ಥರಾಹಿತ್ಯ, ಶಾಂತಿ, ಕ್ಷಮಾ, ಶಮದಮಾದಿ ಗುಣಗಳನ್ನು ಸಂಪಾದಿಸಲು ಯತ್ನಿಸುವವರು ನರರು. ಪರಪೀಡೆಯಲ್ಲಿಯೇ ತೊಡಗಿದ್ದು, ಸ್ವಾರ್ಥ, ದುರಭಿಮಾನಗಳಿಂದ ಮತ್ತರಾಗಿ, ಪರಮಾತ್ಮನನ್ನು ವಿರೋಧಿಸುವವರೇ ದೈತ್ಯರು. ಜನನಾಯಕರೆ, ನಿಮ್ಮ ಹೆಸರನ್ನು ಕೇಳಿಬಲ್ಲೆ. ನಿಮಗೆಲ್ಲರಿಗೂ ಅಧ್ಯಾತ್ಮ ಸಾಧನಕ್ಕಾಗಿ ಬಹಳ ತೊಂದರೆಯಾಗುತ್ತಿರುವುದೆಂದು ತಿಳಿದು ಬಹಳ ವಿಷಾದವಾಗಿದೆ.

ಅತಿಥಿ:- ರಾಜಕುಮಾರ ನೀನು ಜ್ಞಾನಿಯಾಗಿರುವೆ. ನಿನಗೆ ತಿಳಿಯದ ವಿಷಯ ಯಾವುದಿದೆ? ಗುರುಕುಲಗಳಲ್ಲಿ ಮಕ್ಕಳಿಗೆ ಅರ್ಥ, ಕಾಮ ಇವೆರಡನ್ನೇ ಹೇಳಬೇಕು. ಧರ್ಮ ಮತ್ತು ಮೋಕ್ಷ ಪುರುಷಾರ್ಥಗಳನ್ನು ಹೇಳಿಕೊಡಬಾರದೆಂಬ ಕಟ್ಟಪ್ಪಣೆಯಾಗಿದೆ. ಇದಲ್ಲದೆ ಸತ್ಕರ್ಮಗಳಿಗೆ ಆಸ್ಪದವಿಲ್ಲದಾಗಿದೆ. ಹೀಗಾಗಿ ಜನ ಸ್ವಾರ್ಥಿಗಳಾಗಿದ್ದಾರೆ. ಕಲಹ ಬೆಳೆಯುತ್ತಿದೆ. ದುರ್ಭಿಕ್ಷೆ ತಾಂಡವವಾಡುತ್ತಿದೆ. ಅನ್ನವಿಲ್ಲದೆ ಜನ ಪ್ರಾಣಬಿಡುತ್ತಿದ್ದಾರೆ. ತಿಳಿದವರು ಸತ್ಕರ್ಮಗಳನ್ನು ನಡೆಸಿದ್ದಾದರೆ ಕ್ರೂರ ಹಿಂಸೆಗೆ ತುತ್ತಾಗುತ್ತಾರೆ. ಆದರೆ ದೇವರ ದಯದಿಂದ ಈ ಅನಾಚಿಯವನ್ನು ಎದುರಿಸುವ ಶಕ್ತಿಯುಳ್ಳ ನರರು ಸಿದ್ಧವಾಗುತ್ತಿದ್ದಾರೆ. ದೇವತೆಗಳಂತೂ ದೇವರಲ್ಲಿ ಆಗಲೇ ಮೊರೆ ಇಟ್ಟಿದ್ದಾರೆ.

ಸುಚೇತ:- ಶಕ್ತಿಯುಳ್ಳ ನರರಿಗೆ ನೀವು ನಾಯಕರಾಗಿದ್ದೀರಿ. ಈ ನರರೆಲ್ಲ ನಿಮಗೆ ನರ-ಸಿಂಹ ಎಂದು ಬಿರುದುಕೊಟ್ಟಿದ್ದಾರೆ. ಅಂದ ಮೇಲೆ ನೀವು ನಮ್ಮ ರಾಜ್ಯವನ್ನು ಉರುಳಿಸಲು ಹೊರಟ ಶಕ್ತಿವಂತರಾಗಿದ್ದೀರಿ. ಅಂದ ಮೇಲೆ....

ಸುಮುಖ:- ಸುಚೇತ, ಅತಿಥಿಗಳು ಹೇಳುವುದನ್ನು ಕೇಳು. ನಡುವೆ ಬಾಯಿ ಹಾಕಬಾರದು.

ಅತಿಥಿ:- ರಾಜಕುಮಾರನ ಸಾತ್ವಿಕವೃತ್ತಿ, ಆತನಲ್ಲಿರುವ ದಯೆ ಮೊದಲಾದ ಗುಣಗಳು, ದೀನರ ಸೇವೆ, ರೋಗಿಗಳ ಚಿಕಿತ್ಸೆ, ಗೋಪಾಲನೆಯೇ ಮುಂತಾದವುಗಳಲ್ಲಿ ಆತನಿಗಿರುವ ಶ್ರದ್ಧೆ, ಜ್ಞಾನಪ್ರಸಾರದಲ್ಲಿ ಆತನಿಗಿರುವ ಕರ್ತವ್ಯನಿಷ್ಠೆ, ಈ ಕಾರ್ಯಗಳನ್ನು ನಡೆಸುವಾಗ ಬರುವ ಮಹಾ ಕಷ್ಟಗಳನ್ನು ಪ್ರಸನ್ನತೆಯಿಂದ ಸಹನೆ ಮಾಡುವ ಶಕ್ತಿ ಇವುಗಳನ್ನು ಕೇಳಿದ್ದೇನೆ. ಆದ್ದರಿಂದ ಈ ಭಗವದ್ಭಕ್ತನಿಂದ ಸಹಾಯಪಡೆಯಬೇಕೆಂದು ಬಂದಿದ್ದೇನೆ. ರಾಜಕುಮಾರ, ನನಗೆ ಅಭಯವನ್ನು ಕೊಡಬೇಕು. ವರಪ್ರದಾನ ಮಾಡಬೇಕು.

ಪ್ರಹ್ಲಾದ:- ನಾವೆಲ್ಲರೂ ಅಸ್ವತಂತ್ರರು. ಯಾರಿಗೂ ಸಹಾಯ ಮಾಡಲು ಶಕ್ತರಲ್ಲ. ಸರ್ವತಂತ್ರ ಸ್ವತಂತ್ರನಾದ ಪರಮಾತ್ಮನೇ ಎಲ್ಲರಿಗೂ ಸಹಾಯಕ. ಆತನಲ್ಲಿ ದೃಢನಂಬಿಕೆ ಇರಲಿ. ಆ ಪ್ರಭು ಎಲ್ಲರನ್ನೂ ಕಾಪಾಡುತ್ತಾನೆ. ಆತನೇ ಆಪ್ತಬಂಧು. ದೀನರಕ್ಷಕ, ದುಷ್ಟರಶಿಕ್ಷಕ, ಶಿಷ್ಟಪರಿಪಾಲಕ.

ಗೆಳೆಯರೇ, ದುರ್ಭಿಕ್ಷೆ, ಕಲಹ, ಅಶಾಂತಿ, ತಾಂಡವಾಡುವುದು ತಾಮಸದ ಲಕ್ಷಣ. ಶಾಂತಿ, ಸುಭಿಕ್ಷೆ, ಸೌಹಾರ್ದ, ದೈವಭಕ್ತಿ ಇವೆಲ್ಲ ಸಾತ್ವಿಕ ಲಕ್ಷಣಗಳು. ಇವನ್ನು ಧಾರಣ ಮಾಡಿಕೊಳ್ಳುವುದೇ ಧರ್ಮ. ಇದಕ್ಕಾಗಿ ಪರಮ ಪುರುಷನಾದ ಪರಮಾತ್ಮನನ್ನು ಸೇವಿಸುವುದೇ ಮುಖ್ಯ ಧರ್ಮ.

ಅತಿಥಿ:- ರಾಜಕುಮಾರಾ, ಇಂದು ನಿನ್ನಂತಹ ಭಗವದ್ಭಕ್ತನ ದರ್ಶನವಾಗಿ ನಾನು ಪುನೀತನಾಗಿದ್ದೇನೆ. ಭವಗವದಾರಾಧನೆಗೆ ಪ್ರಭುತ್ವವು ನಿಷೇಧಿಸಿದರೇನಾಯಿತು? ನಮ್ಮ ವೈಯಕ್ತಿಕ ಸ್ವಾತಂತ್ರ್ಯವನ್ನು ಯಾರೂ ಹರಣ ಮಾಡಲಾರರು. ನಿಮ್ಮೆಲ್ಲರ ಸಂದರ್ಶನದಿಂದ, ಭಗವದಾರಾಧನೆ ನಡೆಸುವ ಪ್ರತಿಜ್ಞೆಯು ಎನ್ನಲ್ಲಿ ಇನ್ನಷ್ಟು ದೃಢವಾಯಿತು. ಬೇಕಾದಂತಹ ಕಷ್ಟಗಳು ಬರಲಿ, ಹಿಂಜರಿಯುವುದಿಲ್ಲ.

ಪ್ರಹ್ಲಾದ:- ಕಷ್ಟ ಸುಖ ಎಂಬುದು ಒಂದು ಭ್ರಮೆ. ಈ ದೇಹಕ್ಕೆ ಒದಗುವ ಸ್ಥಿತಿಯೆಲ್ಲ ಆತ್ಮಕ್ಕೆ ಇಲ್ಲ. ಇದನ್ನು ದಂಡಿಸಿದರಾಗಲಿ, ಕಿವಿಗಳಿಗೆ ಭಗವನ್ಮಹಿಮಾ ವ್ಯತಿರಿಕ್ತವಾದ ಮಾತುಗಳನ್ನು ಕೇಳಿಸಿದರಾಗಲಿ ಅವೆಲ್ಲವೂ ಉಪೇಕ್ಷಣೀಯ. ಕಷ್ಟಗಳಲ್ಲ ಅವು. ಭಗವದಾರಾಧನೆಯನ್ನು ನಡೆಸುವುದಕ್ಕಾಗಿ ನಮಗೆ ದೃಢತೆ ಕೊಡಲೋಸುಗ ಬಂದ ಸಂಘರ್ಷಣೆಯ ಸಲಕರಣೆಗಳು. ಇವು ಇಲ್ಲದಿದ್ದರೆ ನಮ್ಮಲ್ಲಿ ದೃಢತೆ ಬೇರೂರುವುದಿಲ್ಲ.

ಅತಿಥಿ:- ಧನ್ಯ! ರಾಜಕುಮಾರ ಧನ್ಯ! ನೀನು ಬಾಲಕನೆಂದು ಭ್ರಮಿಸುವ ನಾವು ಅಜ್ಞರು. ನಿನಗೆ ದೀರ್ಘದಂಡ ಪ್ರಣಾಮಗಳನ್ನು ಮಾಡುತ್ತೇನೆ. ಅನುಗ್ರಹಿಸಬೇಕು. (ಎಂದು ಅತಿಥಿ ಪ್ರಹ್ಲಾದರಾಯನ ಕಾಲ ಮೇಲೆ ಉದ್ದಕ್ಕೆ ಬೀಳುತ್ತಾನೆ.)

ಪ್ರಹ್ಲಾದ:- ಏಳಿರಿ, ಹಿರಿಯರೆ. ಎದ್ದು ಕುಳಿತುಕೊಳ್ಳಿರಿ. ನೀವು ಅಜ್ಞರಲ್ಲ. ದಂಡಪ್ರಣಾಮಗಳೆಲ್ಲ ಭಗವಂತನಿಗೆ ಸಲ್ಲತಕ್ಕುವು. ಆತನನ್ನು ಬಿಟ್ಟು ಇತರರಿಗೆ ಸಲ್ಲವು ಎಂಬುದು ನಿಮಗೆ ಗೊತ್ತಿದೆ.

ಗೆಳೆಯರೆ, ಪ್ರಾರ್ಥನೆಯನ್ನು ಆರಂಭಿಸೋಣ.

(ಎಲ್ಲರೂ ಪದ್ಮಾಸನ ಹಾಕಿಕೊಂಡು ಕುಳಿತುಕೊಳ್ಳುವರು. ಪ್ರಹ್ಲಾದನು ಹೇಳುವನು, ಎಲ್ಲರೂ ಹಿಂಬಾಲಿಸುವರು.)

ಪ್ರಹ್ಲಾದ:- ಹರಿ! ಓಂ!

ಹರಿ ನಾರಾಯಣ | ಹರಿ ನಾರಾಯಣ
ದುರಿತನಿವಾರಣ | ಕರುಣಾಪೂರಣ ||೧||
ಜಗದಾಧಾರ | ನಿಗಮೋದ್ಧಾರ
ಅಘಗಳ ಕಳೆಯುವ | ಜಗದೋದ್ಧಾರ ||೧||
ಶರಣರ ಪೋಷಿಪ | ಕರುಣಾ ಸಾಗರ |
ಸ್ಮರಣೆಯ ಸುಧೆಯ | ಶ್ರವಣವ ನೀಡೈ ||
ದುಷ್ಟರ ಶಿಕ್ಷಕ | ಶಿಷ್ಟರ ಪಾಲಕ ಅ
ನಿಷ್ಟವ ಕಳೆದೆಮು | ಗಿಷ್ಟವ ಪಾಲಿಸು ||೩||
ಹರಿನಾರಾಯಣ | ಹರಿನಾರಾಯಣ........

(ಚಂಡಾಮರ್ಕರ ಪ್ರವೇಶ)

ಚಂಡ:- ಪ್ರಹ್ಲಾದ! ಏನಿದು ಅನಾಹುತ!

(ಎಲ್ಲರೂ ಎದ್ದು ನಿಲ್ಲುವರು. ಪ್ರಣಾಮಮಾಡುವರು)

ಅಮರ್ಕ:- ನಿಮಗೆಲ್ಲ ಮಂಗಳವಾಗಲಿ. ರಾಜಕುಮಾರ, ನೀನು ಪುನಃ ನಿನ್ನ ಕೆಲಸವನ್ನೇ ಆರಂಭಿಸಿದೆಯಲ್ಲ. ಹೀಗಾದರೆ ನೀನು ನಮ್ಮನ್ನು ರಾಜಾಗ್ರಹಕ್ಕೆ ಈಡು ಮಾಡುವೆ.

ಪ್ರಹ್ಲಾದ:- ಗುರುಗಳೇ, ರಾಜಾಗ್ರಹಕ್ಕೆ ಜ್ಞಾನಿಗಳು ಹೆದರುವುದಿಲ್ಲ. ಈ ರಾಜರು ಮೆಚ್ಚಿದರೆ ಮನೆ, ಮಠ, ಅಧಿಕಾರ, ಧನ, ವಾಹನ ಮಾತ್ರ ಕೊಡಬಲ್ಲರು. ರಾಜಾಧಿರಾಜ ಮಹಾರಾಜನಾದ ಭಗವಂತನ ಅನುಗ್ರಹ ವಾದರೆ ಆತನು ತನ್ನ ಆಲಯದಲ್ಲಿಟ್ಟುಕೊಂಡು ಮಕ್ಕಳಂತೆ ತಾನೇ ವಶ ವಾಗುತ್ತಾನೆ. ಆತನ ಅನುಗ್ರಹ ಸಂಪಾದನೆಗೆ ಪ್ರಯಾಸವೇ ಇಲ್ಲ. ಆತನೇ ದಯವಿಟ್ಟು ಕೊಟ್ಟ ತನುಮನಗಳನ್ನು ಆತನಿಗೆ ಅರ್ಪಿಸಿದರೆ ಸಾಕು. ಅಂತಹ ರಾಜಾಧಿರಾಜನ ಅನುಗ್ರಹ ಸಂಪಾದಿಸುವಾಗ, ಈ ರಾಜರ ಆಗ್ರಹ ಏನೂ ಮಾಡಲಾರದು.

ಚಂಡ:- ನೀನೇ ನಮಗೆ ಉಪದೇಶಕನಾಗುವುದು ಬೇಡ. ನಮಗೆಲ್ಲ ತಿಳಿಯುತ್ತದೆ. ನಿನಗೆ ನಾನೆಷ್ಟುಸಲ ದಂಡಿಸಿದರೂ ನಿಷ್ಫಲವೇ ಆಯಿತು. ನಾಯಿಯ ಬಾಲದಂತಾಗಿದೆ ನಿನ್ನ ಸ್ಥಿತಿ. ಬಾಲಕರೆ, ನೀವೆಲ್ಲರೂ ಇಲ್ಲಿಂದ ತೊಲಗಿರಿ. ನೀವು ಈತನ ಸಹವಾಸದಲ್ಲಿರಬೇಡಿರಿ.

ಬಾಲಕರು:- ಗುರುಗಳೇ, ಆತನು ಹೇಳುವುದು ಸಮಂಜಸವಾಗಿದೆ ಯಲ್ಲ. ಏಕೆ ಆತನನ್ನು ದೂಷಿಸಬೇಕು.

ಅಮರ್ಕ:- (ಸ್ವಗತ) ಪರಿಸ್ಥಿತಿ ಗಂಭೀರವಾಗಿದೆ. ನಮಗಿನ್ನು ಅಂಕಿತದಲ್ಲಿಡುವುದು ಸಾಧ್ಯವೇ ಇಲ್ಲ. ದಾನವೇಂದ್ರನಿಗೆ ರಾಜಕುಮಾರ ನನ್ನು ಒಪ್ಪಿಸಿಬಿಡುವುದೇ ಒಳಿತು.

ರಾಜಭಟರು:- (ಪ್ರವೇಶಿಸಿ) ಗುರುಗಳಿಗೆ ಜಯವಾಗಲಿ.

ಚಂಡ:- ಏನು ಬೇಕು?

ರಾಜಭಟರು:- ಗುರುಗಳೇ! ಇದು ನೋಡಿ. ಅಲ್ಲಿ ನಿಂತಿರುವನಲ್ಲ, ಅವನು ಅಪರಾಧಿ, ರಾಜದ್ರೋಹಿ. ಸೆರೆ ಹಿಡಿದು ತರುವಾಗ ಮಧ್ಯೆ ತಪ್ಪಿಸಿಕೊಂಡು ಬಂದಿದಾನೆ. ಈಗ ಎರಡು ದಿನದಿಂದ ಹುಡುಕುತ್ತಲಿದ್ದೇವೆ. ಅವನನ್ನು ನಮಗೆ ಒಪ್ಪಿಸಿರಿ.

ಅಮರ್ಕ:- ಇವನಾರು? ಇಲ್ಲಿಗೇಕೆ ಬಂದದ್ದು?

ಅತಿಥಿ:- ಗುರುಗಳೇ! ನಾನೊಬ್ಬ ರಾಜಪೀಡಿತ ನರ. ಭಗವದಾರಾಧನೆ ನಡೆಯಿಸುವ ಸ್ವಾತಂತ್ರ್ಯವನ್ನು ಕಳೆದುಕೊಂಡ ರಾಜದ್ರೋಹಿ. ರಾಜಭಟರೆ, ಇದೋ ಬಂದೆನು. ಭಗವದ್ಭಕ್ತನ ದರ್ಶನವಾಗಿದೆ. ನನಗಿನ್ನು ನಿಮ್ಮ ರಾಜನ ಭಯವಿಲ್ಲ. ಎಲ್ಲರಿಗೂ ಪ್ರಣಾಮಗಳು.

ಪ್ರಹ್ಲಾದ:- ಜನನಾಯಕ ನರ-ಸಿಂಹ, ನಾರಾಯಣನೇ ನಿಮ್ಮನ್ನು ಕಾಪಾಡುವನು.

[ರಾಜಭಟರು ಆತನನ್ನು ಹಿಡಿದುಕೊಂಡು ಹೋಗುವರು]

ಚಂಡ:- ರಾಜಕುಮಾರ! ನೀನು ನಮ್ಮೊಡನೆ ನಡೆ.

(ಪ್ರಹ್ಲಾದನು ದೇವರ ನಾಮಸ್ಮರಣೆ "ಹರಿನಾರಾಯಣ ಹರಿನಾರಾಯಣ ದುರಿತನಿವಾರಣ ಕರುಣಾಪೂರಣ" ಎಂದು ಹೇಳುತ್ತ ಗುರುಗಳನ್ನು ಹಿಂಬಾಲಿಸುವನು.)

ಬಾಲಕರು:- ಭಕ್ತ ಪ್ರಹ್ಲಾದನಿಗೆ ಜಯವಾಗಲಿ. ರಾಜಕುಮಾರ ಪ್ರಹ್ಲಾದನು ಅರಸನಾಗಲಿ!

೩

[ಹಿರಣ್ಯಕಶಿಪುವಿನ ಅರಮನೆ. ಹಿರಣ್ಯಕಶಿಪು ಉದ್ವಿಗ್ನನಾಗಿದ್ದಾನೆ. ಅತ್ತಿಂದಿತ್ತ ತಿರುಗಾಡುತ್ತಲಿದ್ದಾನೆ. ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುತ್ತಿದ್ದಾನೆ.]

ಹಿರಣ್ಯಕಶಿಪು:- (ನಿಟ್ಟುಸಿರು ಬಿಟ್ಟು) ಹೂಂ! ತಿಳಿಯದಾಗಿದೆ. ಮೂರು ಲೋಕಗಳಲ್ಲಿ ನನ್ನ ಹೆಸರು ಕೇಳಿದರೆ ಜನ ನಡುಗುತ್ತಾರೆ. ಸ್ವರ್ಗಲೋಕವು ಕೂಡ ನನ್ನ ವಶವಾಯಿತು. ಅಲ್ಲಿಯ ಸಕಲಭೋಗದ ವಸ್ತುಗಳೆಲ್ಲ ನನ್ನ ಸೊತ್ತಾದವು. ರಾಜ ಮಹಾರಾಜರುಗಳೆಲ್ಲರೂ ನನ್ನ ಒಂದು ಸಂದೇಶದಿಂದ ಶರಣಾಗತರಾದರು. ನನಗೆ ಎದುರಾಗಿ ನಿಲ್ಲುವಂತಹ

ಶಕ್ತಿ ಜಗತ್ತಿನಲ್ಲಿ ಇಲ್ಲದಿರುವಾಗ ಹತ್ತುವರುಷದ ಈ ಹಸುಳೆ ಯಾರ ಬಲದ ಮೇಲೆ ಇಷ್ಟು ಶಕ್ತಿಯುತವಾಗಿದ್ದಾನೋ ತಿಳಿಯದು. ಆದಾವ ಮಹಾ ಶಕ್ತಿ ಇದೆಯೋ ಅವನಿಗೆ ಅರ್ಥವಾಗಲೊಲ್ಲದು. ದೇವರು ಎಂದು ಅವನು ಹೇಳುವ ಆ ಶಕ್ತಿಯೇ ಅವನಿಗೆ ಬಲವಾಗಿರಬಹುದೆ? ಆದರೆ ಆ ದೇವರು ಎಂದೂ ಯಾರಿಗೂ ಕಂಡಿಲ್ಲ. ಅದೆಲ್ಲ ಸುಳ್ಳು. ಬರೀಸುಳ್ಳು. ಅದೊಂದು ಭ್ರಮೆ. ಹಾಗಾದರೆ ಪ್ರಲ್ಹಾದ! ಅವನೊಬ್ಬ ಸಮಸ್ಯೆಯಾಗಿದ್ದಾನೆ. ಅಥವಾ ನಿಜವಾಗಿಯೂ ದೇವರು ಇರಬಹುದೋ? ಇದ್ದರೆ ಪ್ರಹ್ಲಾದನಿಗೆ ಕಾಣಿಸಿಕೊಂಡಿರಬಹುದೆ! ಇರಲಿಕ್ಕಿಲ್ಲ. ಅವನು ತೀರ ಚಿಕ್ಕವನು. ಅವನಿಗೆ ಇದೆಲ್ಲ ಹೇಗೆ ತಿಳಿದೀತು? ಅಂದಮೇಲೆ ಅವನಿಗೆ ನಾವು ಇಷ್ಟು ಹಿಂಸೆಪಡಿಸಿದರೂ ಏನೂ ಆಗಲಿಲ್ಲವಲ್ಲ! ಆಂಽ! ಅದೇನು ದೈತ್ಯರಿಂದ ಮಾಯದ ಆಟವನ್ನು ಕಲಿತಿರಬಹುದೆ? ಊಂಹು! ಅದೂ ಇರಲಿಕ್ಕಿಲ್ಲ. ಯಾಕಂದರೆ ದೈತ್ಯರೆಂದರೆ ಅವನಿಗೆ ಆಗುವುದಿಲ್ಲ. ದೈತ್ಯರ ಕೃತಿಗಳನ್ನೆಲ್ಲ ಅವನು ನಿಷೇಧಿಸುತ್ತಾನೆ. ದೇವರು, ದೇವರು, ಭಗವಂತ ಎಂದು ಒರಲುತ್ತಾನೆ. ಇಷ್ಟರಿಂದಲೇ ಅವನಿಗೆ ಇಂಥಾ ಶಕ್ತಿಬರಬಲ್ಲುದೆ? ತೀರ ಅಸಂಭವನೀಯ. ನಾವು ಅವನಿಗೆ ಕೊಟ್ಟ ಒಂದೊಂದು ಹಿಂಸೆಯನ್ನು ನೆನೆದರೆ ನನಗೆ ರೋಮಾಂಚವಾಗುತ್ತದೆ. ಆದರೆ ಅವನಿಗೆ ಮಾತ್ರ ಏನೂ ಆಗಲಿಲ್ಲ. ಈ ಸಂಗತಿಯು ಜನರಲ್ಲಿ ಕರ್ಣೋಪಕರ್ಣವಾಗಿ ಹರಡಿಹೋಗಿದೆ. ಇದರಿಂದ ನಮ್ಮ ರಾಜ್ಯದ ಬಲಕ್ಕೆ ಧಕ್ಕೆತಗುಲಿದೆ. ರಾಜದ್ರೋಹಿಗಳ ತಂಡ ತಲೆಯೆತ್ತುತ್ತಿವೆ. ಅಯ್ಯೋ! ಇದು ಭಯಾನಕವಾಗಿದೆ. ಇದನ್ನು ಹೇಗೆ ತಡೆಯಬೇಕು? ಗೋದಾವರಿ ತೀರದ ಆ ಸಾಮಾನ್ಯ ನರ ಅದೆಂತಹ ದಂಗೆಗಾರದಳವನ್ನು ಸಿದ್ಧಮಾಡಿದ್ದಾನೆ. ಶಸ್ತ್ರವಿಲ್ಲ. ಬರಿಯ ಶಾಸನಉಲ್ಲಂಘನೆಗೊಳಿಸುತ್ತಾರೆ. ಈ ಜನಕ್ಕೆ ಸೆರೆಮನೆಯ ಅಂಜಿಕೆಯೇ ಇಲ್ಲದಾಗಿದೆ. ಅವನ ಅನುಯಾಯಿಗಳೆಲ್ಲ ಅವನಿಗೆ ನರ-ಸಿಂಹ ಎಂದು ಬಿರುದು ಬೇರೆ ಕೊಟ್ಟಿದ್ದಾರಂತೆ. ಅಯ್ಯೋ! ಈ ನರಪಿಳ್ಳೆಗಳು ನಮ್ಮ ರಾಜ್ಯದಲ್ಲಿ ತಲೆಯೆತ್ತುವಂತಾದುವಲ್ಲ. ಇದಕ್ಕೆಲ್ಲ ನಮ್ಮ ಕುಲ ಕುಠಾರ ಆ ನೀಚ ಪ್ರಹ್ಲಾದನೇ ಕಾರಣ. ಆದರೆ ಬರಿಯಕೋಪದಿಂದ ಕಾರ್ಯ ನಡೆವಂತಿಲ್ಲ ಏನು ಮಾಡಬೇಕು? ಆಂಽ........ ಯಾರಲ್ಲಿ?

ರಾಜಸೇವಕ:- (ಪ್ರವೇಶಿಸಿ) ಮಹಾಪ್ರಭೋ ! ಅಪ್ಪಣೆ.

ಹಿರಣ್ಯ:- ಸಚಿವರು ಇದ್ದಾರೆಯೆ ?

ರಾಜಸೇವಕ:- ಮಹಾಪ್ರಭೋ! ಸಚಿವರು ಇದೀಗ ಮನೆಗೆ ಮರಳಿದರು. ನಗರರಕ್ಷಕರು ದರ್ಶನಾರ್ಥಿಗಳಾಗಿ ಕಾದಿದ್ದಾರೆ.

ಹಿರಣ್ಯ:- ಅವರನ್ನು ಬರಮಾಡು.

ನಗರರಕ್ಷಕ:- (ಪ್ರವೇಶಿಸಿ) ದೊರೆಗಳಿಗೆ ಜಯವಾಗಲಿ. ಗೋದಾವರಿ ತೀರದ ಆ ರಾಜದ್ರೋಹಿ ಸಿಕ್ಕಿದಾನೆ.

ಹಿರಣ್ಯ:- ಬರೀ ಸಿಕ್ಕಿದಾನೆಂದು ಹೇಳಿದರೆ ಸಾಲದು. ನನಗೆ ತಂದು ತೋರಿಸಬೇಕು. ಅವನಿಗೆ ನಾನೇ ಶಿಕ್ಷೆ ಕೊಡುತ್ತೇನೆ. ಎಲ್ಲಿದ್ದಾನೆ ?

ನಗರ ರಕ್ಷಕ:- ಭಟರೆ, ರಾಜದ್ರೋಹಿಯನ್ನು ಸನ್ನಿಧಿಗೆ ಬರಮಾಡಿರಿ.

[ಭಟರು ರಾಜದ್ರೋಹಿಯನ್ನು ಕೈ-ಕಾಲುಗಳಿಗೆ ಸಂಕೋಲೆಗಳನ್ನು ಬಿಗಿದುಕೊಂಡು ತರುವರು.]

ರಾಜದ್ರೋಹಿ:- ರಾಜನೇ! ನಾನು ನಿನ್ನ ರಾಜ್ಯಕ್ಕೆ ದ್ರೋಹಿಯಾಗಿದ್ದೇನೆ ನಿಜ. ಆದರೆ ನಿನ್ನಂತರ್ಗತ ಪರಮಾತ್ಮನಿಗೆ ಪ್ರಣಾಮ ಮಾಡುತ್ತೇನೆ.

ಹಿರಣ್ಯ:- ಮದಾಂಧ, ನನ್ನೆದುರಿನಲ್ಲಿಯೇ ಇಲ್ಲದ ಆ ಪರಮಾತ್ಮನ ಹೆಸರು ಹೇಳಿ ನಮಗೆ ಅಪಮಾನಗೊಳಿಸುವಿಯಾ ? ನಿನಗೆ ಇದಕ್ಕಾಗಿ ಎಂತಹ ಶಿಕ್ಷೆಯಾಗುವುದು ಗೊತ್ತೆ?

ರಾಜದ್ರೋಹಿ:- ರಾಜಕುಮಾರನ ದರ್ಶನವಾಗಿದೆ. ಅಂತಹ ಭಗವದ್ಭಕ್ತನ ದರ್ಶನವಾದ ಮೇಲೆ ನನಗೆ ಯಾವ ಭಯವೂ ಇಲ್ಲ.

ಹಿರಣ್ಯ:- ನಗರರಕ್ಷಕರೆ ? ಇದೇನು ಕಾರಸ್ಥಾನ ? ಇವನಿಗೆ ಆ ನೀಚನ ಮುಖಾವಲೋಕನ ಹೇಗೆ ಆಯಿತು ?

ನಗರರಕ್ಷಕ:- ಮನ್ನಿಸಬೇಕು ಮಹಾಪ್ರಭೋ! ಈ ಧೂರ್ತನು ನಗರಕ್ಕೆ ಬಂದ ಕೂಡಲೇ ಮೊನ್ನೆ ತಪ್ಪಿಸಿಕೊಂಡಿದ್ದನು. ನಮ್ಮ ಭಟರು ನಿನ್ನೆ ಸಾಯಂಕಾಲ ಈತನನ್ನು ಗುರುಕುಲದಲ್ಲಿ ಸೆರೆಹಿಡಿದರು. ಅಲ್ಲಿ ರಾಜಕುಮಾರನ ಸಂದರ್ಶನವಾಗಿರಬೇಕು ಈತನಿಗೆ.

ಹಿರಣ್ಯ:- ಅಯ್ಯೋ! ಅಯ್ಯೋ! ನಿಮ್ಮ ವ್ಯವಸ್ಥೆ ಇದು, ಹೂಂ! ಬಿಗಿಯಿರಿ ಇವನನ್ನು ಈ ಕಂಭಕ್ಕೆ. ಆ ಕುಲಗೇಡಿ ಪ್ರಹ್ಲಾದನನ್ನು ಈಗಲೇ ಹಿಡಿದು ತನ್ನಿರಿ. ಆ ಚಂಡಾಮರ್ಕರನ್ನೂ ಕರೆದು ತನ್ನಿರಿ. ಒಮ್ಮೆ ಇವರೆಲ್ಲರ ಹಾರುಹತ್ಯವನ್ನು ಮಾಡಿಯೇಬಿಡುವ.

ರಾಜಸೇವಕ:- ಮಹಾ ಪ್ರಭೋ! ಗುರುಪುತ್ರರಾದ ಚಂಡಾಮರ್ಕರು ರಾಜಕುಮಾರನೊಂದಿಗೆ ಆಗಲೇ ಬಂದಿದಾರೆ. ದರ್ಶನಾರ್ಥಿಗಳಾಗಿ ಹೊರಗೆ ಕಾದಿದಾರೆ.

ಹಿರಣ್ಯ:- ಹೀಗೋ! ಆಗಲಿ! ಬರಮಾಡು.

[ಚಂಡಾಮರ್ಕರು ರಾಜಕುಮಾರ ಪ್ರಹ್ಲಾದನೊಂದಿಗೆ ಪ್ರವೇಶಿಸುವರು.]

ಚಂಡಾಮರ್ಕರು:- ಮಹಾರಾಜನಿಗೆ ಅನಂತ ಮಂಗಳವಾಗಲಿ.

[ಪ್ರಹ್ಲಾದನು ತಂದೆಗೆ ದೀರ್ಘದಂಡ ಪ್ರಣಾಮ ಮಾಡುವನು.]

ಹಿರಣ್ಯ:- ಪ್ರಹ್ಲಾದ! ನಿನ್ನ ಈ ವಿನಯ, ಈ ದೀರ್ಘದಂಡ ಪ್ರಣಾಮ, ನನ್ನನ್ನು ಮತ್ತಿಷ್ಟು ಕೆರಳಿಸುತ್ತವೆ. ಗುರುಪುತ್ರರೇ! ಇದೆಲ್ಲ ಏನು ಕಾರಸ್ಥಾನ?

ಚಂಡಾಮರ್ಕ:- ದಾನವೇಂದ್ರ! ನಮ್ಮನ್ನು ಮನ್ನಿಸಬೇಕು. ನಮ ಎಲ್ಲ ಪ್ರಯತ್ನಗಳೂ ನಿಷ್ಫಲವಾದುವು. ರಾಜಕುಮಾರನು ತನ್ನ ದ್ಯಾ! ಯನ್ನು ಬಿಡಲೊಲ್ಲ. ಆದಕ್ಕಾಗಿ ನಮಗೆ ಬಹಳ ದುಃಖವಾಗಿದೆ. ನಿನ್ನೆ ನಾವು ಜಲಾಶಯದಿಂದ ಬರುವುದರೊಳಗಾಗಿ ಈ ರಾಜದ್ರೋಹಿಯನುರಿ ಬಾಲಕರನ್ನು ಕೂಡಿಸಿಕೊಂಡು ಭಜನೆಯನ್ನು ನಡೆಯಿಸಿದ್ದನು ಮಹಾರಾಜ್ಞ ಏನೆಂದು ಹೇಳಲಿ, ಸಮಯಕ್ಕೆ ಸರಿಯಾಗಿ ರಾಜಭಟರು ಬಂದು ಈ ರಾಜದ್ರೋಹಿಯನ್ನು ಸೆರೆಹಿಡಿದರು. ಇದರ ಹೊರತು ನಮಗೆ ಮತ್ತಿನ್ನೇನೂ ಗೊತ್ತಿಲ್ಲ. ರಾಜಕುಮಾರನನ್ನು ನೀವು ಹೇಳಿದ ಮಾರ್ಗಕ್ಕೆ ತರುವುದರಲ್ಲಿ ಮಾತ್ರ ನಮ್ಮ ಸೋಲನ್ನು ಒಪ್ಪಿಕೊಳ್ಳುತ್ತೇವೆ.

ಹಿರಣ್ಯ:- ಹೂಂ! ನೀವೂ ಪರಾಜಿತರಾದಿರಿ. ಆಗಲಿ. ಎಲೆ, ಕುಲಗೇಡಿಯೇ! ನೀನು ಈ ರಾಜದ್ರೋಹಿಗೆ ಆಶ್ರಯವನ್ನು ಕೊಟ್ಟಿರುವೆಯಾ? ಇವನು ರಾಜದ್ರೋಹಿಯೆಂಬುದು ನಿನಗೆ ಗೊತ್ತಿಲ್ಲವೆ?

ಪ್ರಹ್ಲಾದ:- ಜನಕಾ! ಇವರು ತಪಸ್ವಿಗಳೆಂದೂ ಸತ್ಯನಿಷ್ಠ. ರೆಂದೂ, ಭಗವದ್ಭಕ್ತರೆಂದೂ, ಧರ್ಮಸಾಧನೆಯಲ್ಲಿ ಬರುವ ಕಷ್ಟಗಳನ್ನು ಸಹಿಸುವ ಮಹಾಧೀರರೆಂದೂ ನನಗೆ ತಿಳಿದಿದೆ. ರಾಜದ್ರೋಹದ ವಿಷಯ್ವ ನನಗೆ ಸಂಬಂಧಿಸಿದುದಲ್ಲ. ನನಗೆ ಅದು ತಿಳಿಯುವುದೂ ಇಲ್ಲ.

ಹಿರಣ್ಯ:- ಎಲೋ! ದುರ್ವಿನೀತಾ! ಅವನು ರಾಜದ್ರೋಹಿಯೆಂದು ನಾನೇ ಸ್ವತಃ ಹೇಳುತ್ತಿದ್ದರೂ, ನೀನು ಅವನನ್ನು ಸ್ತುತಿಸುತ್ತಿರುವಿ. ಅಥವಾ ನನ್ನ ಶಾಸನದ ಲಕ್ಷ್ಯವೇ ನಿನಗಿಲ್ಲದಾಗಿದೆ. ಕುಲಗೇಡಿ! ಪಿತೃದ್ರೋಹಿ,!

ರಾಜದ್ರೋಹಿ:- ನಾರಾಯಣ! ಭಗವದ್ಭಕ್ತರ ಈ ನಿಂದೆಯನು! ನಾನು ಕೇಳದಂತೆಮಾಡು.

ಹಿರಣ್ಯ:- ಭಟ್ಟರೇ! ಈ ನರಾಧಮನ ನಾಲಗೆಯನ್ನು ಕಿತ್ತಿರಿ ಮನಬಂದಂತೆ ಬಗುಳುತ್ತಾನೆ. ತಾನು ನರಾಧಮನಾದರೂ, ನರ-ಸಿಂಹ ನೆಂದು ಡಂಗುರ ಬೇರೆ ಹೊಡೆಸಿಕೊಳ್ಳುತ್ತಾನೆ. ಭಟರೇ! ಇವನ ನಾಲ ಗೆಯನ್ನು ಕಿತ್ತಿರಿ. ಕಣ್ಣನ್ನು ಕೀಳಿರಿ. ಕಿವಿಯಲ್ಲಿ ಕಾದ ಸೀಸವನ್ನು ಹಾಕಿರಿ.

ಪ್ರಹ್ಲಾದ:- ಮಹಾರಾಜ! ಪ್ರಜೆಗಳ ಪೀಡೆಯಿಂದಲೇ ರಾಜದ್ರೋಹ ಬಲಿಯುತ್ತದೆ. ಅದು ರಾಜ್ಯಕ್ಕೆ ಒಳಿತಲ್ಲ. ಇವರು ಶಾಂತಿಯುತರಾದ ಪ್ರಜೆರು. ಸುಜೀವಿಗಳು. ಇವರಿಗೆ ಹಿಂಸೆಯಾದರೆ, ಅವರನ್ನು ಪ್ರೀತಿ ಸುವ ಲಕ್ಷಾವಧಿ ಜನರಿಗೆ ತಾಪವಾಗುತ್ತದೆ.

ಹಿರಣ್ಯ:- ಎಲಾ ಮೂರ್ಖಾ! ನನಗೆ ಉಪದೇಶಮಾಡುವಿಯಾ? ನಾನು ಕೋಪಗೊಂಡ ಮಾತ್ರಕ್ಕೆ ಲೋಕಪಾಲಕರೊಡಗೂಡಿದ ಮೂರು ಲೋಕಗಳು ನಡುಗುವುವು. ಇದನ್ನು ತಿಳಿದೂ ನೀನು ನಿರ್ಭಯವಾಗಿ ನನ್ನ ಮಾತನ್ನು, ಶಾಸನವನ್ನು, ಮೀರಿ ನಡೆಯುತ್ತಿರುವೆಯಾ? ಯಾರ ಬಲದ ಮೇಲೆ ನೀನು ಇಷ್ಟು ಕುಣಿಯುತ್ತಿರುವಿ? ಪ್ರಹ್ಲಾದ! ನಿಜವಾಗಿ ಹೇಳು. ಇಲ್ಲವಾದರೆ ನಿನ್ನ ಅವಸ್ಥೆ ನಾಯಿಗಿಂತ ಕೀಳಾದೀತು.

ಪ್ರಹ್ಲಾದ:- ಪರಾಕ್ರಮಶಾಲಿಯಾದ ದಾನವೇಂದ್ರ! ನೀನೂ, ನಿನ ಗಿಂತ ಬಲಾಢ್ಯರಾದವರೂ ಯಾರ ಬಲದಿಂದ ಬದುಕಿರುವರೋ ಆತನೇ

ನನಗೆ ಬೆಂಬಲವಾಗಿದ್ದಾನೆ. ಬ್ರಹ್ಮನಿಂದ ಮೊದಲುಗೊಂಡು ಚರಾಚರಾತ್ಮಕವಾದ ಸಮಸ್ತ ಪ್ರಪಂಚವೂ ಯಾರ ವಶವಾಗಿರುವುದೋ, ಅವನೇ ಎಲ್ಲರಿಗೂ ನಿಯಾಮಕನು. ಆತನೇ ಕಾಲಸ್ವರೂಪಿ. ಇಂದ್ರಿಯಶಕ್ತಿ, ಮನೋಬಲ, ಧೈರ್ಯ, ದೇಹಬಲ ಇವೆಲ್ಲಕ್ಕೂ ಆತನೇ ಆಧಾರ. ಅನಂತ ಮಹಿಮೆಯುಳ್ಳ ಆತನು ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರವನ್ನು ನಡೆಸುವನು. ಅದಕ್ಕೆ ಕಾರಣಗಳಾದ ಸತ್ವರಜತಮೋಗುಣಗಳಿಗೂ ಆತನೇ ಮೂಲಾಧಾರನು, ಜನಕಾ! ನನಗಾಗದರೂ ಸರ್ವೇಶ್ವರನಾದ ಆ ಶ್ರೀಹರಿಯುಬಲವೇ ಬಲವು.

ಹಿರಣ್ಯ:—ನಿನಗೆ ಯಾವುದೋ ಭೂತಬಡಿದಂತಿದೆ. ದೈತ್ಯ ಕುಲದ ಶತ್ರುವಾದ ಆ ಹರಿ ನಮಗೆ ಎಂದಾದರೂ ಬಲವಾಗುತ್ತಾನೆಯೆ ?

ಪ್ರಹ್ಲಾದ:—ಶ್ರೀಹರಿ ಎಂದಕೂಡಲೇ ಆತನು ವರಾಹರೂಪಿಯಾಗಿ ಹಿರಣ್ಯಾಕ್ಷನನ್ನು ಕೊಂದನು. ದೈತ್ಯ ಕುಲಕ್ಕೆ ವೈರಿ. ಆತನು ನಮಗೆ ಬಲವಾಗಿರಲಾರನೆಂದು ಶಂಕಿಸಬೇಡ. ರಾಕ್ಷಸ ಸ್ವಭಾವವನ್ನು ಬಿಟ್ಟು ಸುಬುದ್ಧಿಯಿಂದ ಭಾವಿಸಿದರೆ ಯಾವ ಶತ್ರುಗಳೂ ಇರಲಾರರು. ದುರ್ವಿಷಯಗಳಲ್ಲಿ ಪ್ರವರ್ತಿಸುವ ಮನಸ್ಸಿಗಿಂತ ಬೇರೆ ಶತ್ರುಗಳಿಲ್ಲ. ಈ ಸತ್ಯವನ್ನು ತಿಳಿಯಬೇಕು.

ಹಿರಣ್ಯ:—ಸಾಕು ಬಾಯಿಮುಚ್ಚು. ಮೂರ್ಖಾ, ನಿನಗೆ ಮರಣ ಸಮೀಪಿಸಿದೆ. ಅಂತೆಯೇ ಮನಬಂದಂತೆ ಬಗುಳುತ್ತಿರುವೆ. ಮುಖ್ಯ ನೀನು ದುರ್ಜೀವಿ. ನನ್ನ ಕೈಯಿಂದಲೇ ನೀನು ಸಾಯಬೇಕಾಗಿದೆ. ಎಲೆ ಮೂಢಾ, ನನಗಿಂತಲೂ ಬೇರೆ ಈಶ್ವರನೊಬ್ಬ ಇದ್ದಾನೆಂದು ಹೇಳುವೆಯಲ್ಲವೆ? ಅವನಾರು? ಎಲ್ಲಿದ್ದಾನೆ? ಎಲ್ಲಾ ಸುಳ್ಳು ಭ್ರಮೆಯಲ್ಲಿ ಬಿದ್ದು ಜನರನ್ನು ಮೋಸಗೊಳಿಸುತ್ತಿರುವಿರಿ. ನಿನ್ನನ್ನೂ, ಈ ರಾಜದ್ರೋಹಿಯನ್ನೂ ಕೊಲ್ಲುವೆನು. ಬರಲಿ, ನಿನ್ನ ಆ ದೇವರು! ಇವನನ್ನು ಕಟ್ಟಿಹಾಕಿದ ಕಂಬದೊಳಗಿಂದ ಬರುತ್ತಾನೇನೋ ನೋಡುತ್ತೇನೆ.

ಪ್ರಹ್ಲಾದ:—ಆತ ಎಲ್ಲೆಡೆಗೂ ಇದ್ದಾನೆ. ಕಂಬದಲ್ಲಿಯೂ ಇದ್ದಾನೆ. ಆತನು ಇಚ್ಛಿಸಿದರೆ ಅಲ್ಲಿಂದಲೂ ಬರಬಲ್ಲ.

ಹಿರಣ್ಯ:—ಅಯ್ಯೋ! ನಿನ್ನ ಮೂರ್ಖತೆಯೆ? ಕಂಬದೊಳಗಿಂದ ಬರುವನೆ? ಆಹಾಹಾಹಾ! ಭಟರೆ, ಈ ರಾಜದ್ರೋಹಿಯನ್ನು ನೀವು ಇರಿದುಕೊಲ್ಲಿರಿ. ಇಲ್ಲಿಯೇ! ನನ್ನ ಎದುರಿನಲ್ಲಿಯೇ! ಬಾಯಿಗೆ ಬಂದಂತೆ ಹರಟುವ ಈ ಹಾಳು ಮಗನನ್ನು ನಾನೇ ಕೊಲ್ಲುವೆ. (ಕತ್ತಿಯನ್ನು ಒರೆಯಿಂದ ಹಿರಿದು) ಶೂರರನ್ನು ಕೊಂದ ಈ ಕತ್ತಿಯಿಂದ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಹಸುಳನನ್ನು ಕೊಲ್ಲುತ್ತೇನೆ. ಇವನು ಮಗನಲ್ಲ; ವೈರಿ. ಇದೋ ಸಿದ್ಧನಾಗು.

[ಪ್ರಹ್ಲಾದ, ರಾಜದ್ರೋಹಿ ದೇವರ ನಾಮಸ್ಮರಣೆ ಬಿಟ್ಟೂಬಿಡದೆ ಮಾಡುತ್ತಿದ್ದಾರೆ. ರಾಜಭಟರು ರಾಜದ್ರೋಹಿಯಮೇಲೆ, ಹಿರಣ್ಯಕಶಿಪು ಪ್ರಹ್ಲಾದನಮೇಲೆ, ಕೈ ಎತ್ತುತ್ತಲೇ ಮಹಾಭೂಕಂಪದ ನಡುಕ ಆಗುತ್ತದೆ. ಲೋಕವೇ ತಲ್ಲಣಿಸುವಂತಹ ಧ್ವನಿಯಾಗುತ್ತದೆ. ಪ್ರಹ್ಲಾದನ ಹರಿನಾಮಸ್ಮರಣೆ ಮಾತ್ರ ನಡೆದಿದೆ. ಹಿರಣ್ಯಕಶಿಪು ಹೌಹಾರಿದ್ದಾನೆ. ಗಾಬರಿಯಾಗಿ ಏನೋ ಹೇಳುತ್ತಿದ್ದಾನೆ. ಅವನು ಹೇಳುತ್ತಿರುವಾಗ ಪ್ರಹ್ಲಾದನು ನಡೆಸಿದ ನಾಮೋಸ್ಮರಣೆ ಕೇಳುತ್ತಲೇ ಇದೆ.]

ಹಿರಣ್ಯಕಶಿಪು:—ಇದೇನಾಯಿತು? ಇದೇನು ಭೂಕಂಪವೆ? ಆಹಾ! ಇದೆಂತಹ ಬೆಳಕು. ನನ್ನ ಖಡ್ಗವೆತ್ತಬಿತ್ತು? ಅರೆರೆ! ಇದಾವ ಮೃಗ ಬರುತ್ತಿದೆ. ಅರಮನೆಯಲ್ಲಿ ತಿರುಗುತ್ತಲಿದೆ. ಅಯ್ಯೋ, ಕಾಡುಮೃಗ, ಸಿಂಹ. ಅಲ್ಲ ಮನುಷ್ಯಾಕೃತಿ. ಏನೋ ವಿಚಿತ್ರ ಪ್ರಾಣಿ! ಹೊತ್ತು ಮುಳುಗುವ ಸಮಯದಲ್ಲಿ ಇದೇಕೆ ಬಂತು? ಅಯ್ಯಯ್ಯೋ! ಕೋರೆ ದಾಡೆಗಳಿವೆ. ಭಟರೇ! ಕೊಲ್ಲಿರಿ. ಈ ಮೃಗವನ್ನು, ಎಲಾ, ಎಲ್ಲರೂ ಸತ್ತು ಹೋದರೆ, ಈ ಭೂಕಂಪಕ್ಕೆ! ಪ್ರಹ್ಲಾದ! ಏನಿದು ಇವನೇ ನಿನ್ನ ದೇವರೇನು? ಅದೋ, ಮೇಲೇರಿ ಬರುತ್ತಿದ್ದಾನೆ. ಬೇಡವೆಂದು ಹೇಳು. ಬೇಡ, ಹೇಳಬೇಡ. ನಾನುದೇವರನ್ನು ನಂಬುವುದಿಲ್ಲ ಅಯ್ಯೋ, ಸತ್ತೆ! ಆಂ! ನನ್ನ ಕರುಳು.................ಆಂ! ಸತ್ತೆ! (ಉರುಳುವನು.)

ನರಸಿಂಹ:—ಪ್ರಹ್ಲಾದ! ಸತ್ಯಕ್ಕಾಗಿ ನೀನು ಮಾಡಿದ ಆಗ್ರಹ ನನ್ನನ್ನು ಮೆಚ್ಚಿಸಿದೆ. ಇಂತಹ ಸತ್ಯಾಗ್ರಹದಿಂದ ನಾನು ಸಂಪ್ರೀತನಾಗಿದ್ದೇನೆ ಎಂಬುದು ಜಗತ್ತು ತಿಳಿಯಲಿ.

